ಸಂಪಾದಕ:
ಕೆ. ಹೊನ್ನಯ್ಯ ಶೆಟ್ಟಿ



[ ಶ್ರೀ ಕೊಡವಟಿಗಂಟಿ ಕುಟುಂಬರಾಯರ ತೆಲುಗು ಕಾದಂಬರಿ "ಕುಲಂಲೇನಿ ಮನಿಷಿ" ಯ ಅನುಕರಣ. ]

ವಿಕ್ರಯಾಧಿಕಾರಿಗಳು:
ನವಯುಗ ಎಂಟರ್‌ಪ್ರೈಸ್ ಲಿಮಿಟೆಡ್,
ನವಯುಗ ಪ್ರೆಸ್, ಉಡುಪಿ.

ಮುದ್ರಕರು:
ನವಯುಗ ಪ್ರೆಸ್, ಉಡುಪಿ.

# ಅನುವಾದಕರ ಮಾತು

## (ಮೊದಲ ಮುದ್ರಣ)

'ಅಂತರಂಗ'ದ ಅಂತರಂಗದ ಕರೆಬಂತು. ಬರೆದಿಟ್ಟ ಈ ಕಾದಂಬರಿಯ ಕರಡನ್ನು ಮತ್ತೊಮ್ಮೆ ಓದಿದೆ. ಗೆಳೆಯ ಶ್ರೀ. ಎಸ್. ಆರ್. ಮಳಗಿ, ಎಂ. ಎ. ಬಿ. ಟಿ., ಮತ್ತು ಶ್ರೀ. ದೇಸಾಯಿ ದತ್ತಮೂರ್ತಿಯವರು ಸೂಚಿಸಿದ ಸವರಣೆಗಳಿಗಾಗಿ ನಾನು ಋಣಿಯಾಗಿದ್ದೇನೆ. ಬರೆದು ಮುಗಿಸಿದ್ದುದು ೧೯೪೭ರ ಮಾರ್ಚಿಯಲ್ಲಿ; ಪ್ರಕಾಶಕರ ಕೈಸೇರಿದುದು ಇಂದು. ಈ ಸಾಹಸ, ನನ್ನ ಆಪ್ತಮಿತ್ರರಾದ ಅಂತರಂಗದವರಾದ ಶ್ರೀ. ಹೊನ್ನಯ್ಯ ಶೆಟ್ಟರದೆಂದು ಬರೆಯದಿರಲಾರೆ. ಅವರಿಗೆ ನನ್ನ ನಮಸ್ಕಾರಗಳು.

ಇದು ಸ್ವತಂತ್ರ ಹೊತ್ತಿಗೆಯಾಗಿ ಹೊರಡ ಬೇಕಾಗಿತ್ತು. ಆದರೆ ಈ ರೂಪದಲ್ಲಿ ತಡವಾಗಿಯಾದರೂ ಓದುಗರ ಕೈಸೇರಲಿದೆ. ಸಂತೋಷ.

ಇದು ಶ್ರೀಯುತ ಕೊಡವಟಿಗಂಟಿ ಕುಟುಂಬರಾಯರು, ಎಂ. ಎಸ್. ಸಿ., ಇವರ "ಕುಲಂಲೇನಿ ಮನಿಷಿ"ಯ ಅನುಕರಣ. ಇವರು ಕೇಂದ್ರ ಸರಕಾರ ಪ್ರಕಾಶನ ಖಾತೆಯಲ್ಲಿ, [ತೆಲುಗು ಶಾಖೆ] ಕೆಲಸ ಮಾಡಿ, ಅನೇಕ ಸಿನೇಮಾ, ನಾಟಕಗಳಿಗೆ ಕತೆ ಭಾಷಣಗಳನ್ನೊದಗಿಸಿ, ಚಲಚಿತ್ರಗಳ ನಿರ್ಮಾಣದಲ್ಲಿ ಭಾಗ ವಹಿಸಿ, ಈಗ ಶಾಂತ ಜೀವನವೇ ಮಾನವನಿಗೆ ಸುಖವನ್ನೀಯುವುದೆಂಬ ನಂಬಿಕೆಯಿಂದ ಪ್ರಖ್ಯಾತ ತೆಲುಗು ದಿನಪತ್ರಿಕೆಯಾದ ಆಂಧ್ರಪತ್ರಿಕೆಯಲ್ಲಿ ಉಪ ಸಂಪಾದಕರಾಗಿರುವರು. ಮದರಾಸಿಗೆ ಹೊಂದಿಕೊಂಡಿರುವ ಉಪನಗರಗಳಲ್ಲೊಂದಾದ ಸೈದಾಪೇಟೆಯಲ್ಲಿ ಮನೆ ಇದೆ. ಇವರು, ಇವರ ಹೆಂಡತಿ, ಮಾವ, ಅತ್ತೆ, ಭಾವಮೈದುನ, ನಾದಿನಿ, ಎಲ್ಲರೂ ಬರೆಹಗಾರರೆ. ಕತೆಗಾರ್ತಿ, ಉತ್ತಮ ನಟಿಯಾದ ಶ್ರೀಮತಿ ಕೊಮ್ಮೂರಿ ಪದ್ಮಾವತಿದೇವಿಯವರ ಮಗಳನ್ನು ಇವರು ಮದುವೆಯಾಗಿರುವರು. ಉತ್ತಮ ರಸಿಕ ಮನೆತನ. ವಿದ್ಯೆ ವಿನಯ ಸಂಪತ್ತುಗಳಿಂದ ಮಿನುಗುತ್ತಿರುವ ಇವರ ಮನೆ, ಅದೊಂದು ಸರಸ್ವತಿ ನಿಲಯವೇ ಸರಿ.

ಶ್ರೀ. ಕುಟುಂಬರಾಯರು ಹೊಸ ತೆಲುಗು ಸಾಹಿತ್ಯಕ್ಕೆ ಹೇರಳ

ವಾದ ಉತ್ತಮ ಕಾಣಿಕೆಗಳನ್ನಿತ್ತಿರುವರು. ಇವರ 'ನವಲ'ಗಳೂ (ಕಾದಂಬರಿಗಳು), ಕಥಾನಕಗಳೂ, ಹರಟೆಗಳೂ ಚಿರಪರಿಚಯ. Anatole Franc ಇವರಿಗೆ ರಚಿಸುವ ಕತೆಗಾರ. ಅನೇಕ ಪಾಶ್ಚಾತ್ಯ ಕತೆಗಾರರ ಪೂರ್ಣ ಪರಿಚಯ ಇವರಿಗಿದೆ.

ಎತ್ತರವಾದ ದೇಹಾಕೃತಿ; ಸುಂದರ ಮುಖ; ಅರಳಿದ ಕಣ್ಣು. ನಗು ಮುಖದಿಂದಲೂ, ಸೂಕ್ಷ್ಮ ದೃಷ್ಟಿಯಿಂದಲೂ ಇವರು ಮಿತ್ರರನ್ನು ಮಾತನಾಡಿಸುವ ವಿಧಾನ ಮನಮೋಹಕ; ಉತ್ತಮ ಹರಟೆಗಾರರು. ತಮ್ಮ ಕೃತಿಗಳನ್ನು ಕನ್ನಡಕ್ಕೆ ಇಳಿಸಲು ನನಗೆ ಅನುಮತಿಯನ್ನಿತ್ತಿರುವರು. "ತೆಲುಗು ಸಿನೆಮಾ" ಮತ್ತು "ಮಂಜೂಷ" ಎಂಬ ಮಾಸಪತ್ರಿಕೆಗಳು ಕೊಮ್ಮೂರು ಬಂಧುಗಳಿಂದ ನಡೆಸಲ್ಪಟ್ಟದ್ದರೂ ಇವುಗಳಲ್ಲಿ ಇವರ ಕೈವಾಡವಿದೆ ಎನ್ನಬಹುದು.

ಈ ಕಾದಂಬರಿಯು, ಮದ್ರಾಸ ಪ್ರಾಂತದ ಉತ್ತರ ಸರಕಾರ ಜಿಲ್ಲೆಗಳಾದ ಗಂಜಾಂ, ವಿಶಾಖಪಟ್ಟಣ, ಗುಂಟೂರು, ಗೋದಾವರಿ, ಜಿಲ್ಲೆಗಳಲ್ಲಿಯ ವೇಶ್ಯಾಕುಲದ ಜೀವನದ ಒಂದು ಬಗೆಯ ಚಿತ್ರ. ಶ್ರೀಯುತ ಗುಟಿಪಾಟಿ ವೆಂಕಟಾಚಲಂರಂತೆ, ಇದರಲ್ಲಿ ದೇವದಾಸಿ ಕುಲದ ಉದ್ಧಾರವೇ ಮುಖ್ಯ ಉದ್ದೇಶವೆಂದು ನೆನೆದು ಬರೆದ ಕತೆ ಇದು. ಕೀ. ಶೇ. ವೀರೇಶಲಿಂಗಂ ಪಂತಲು, ಅವರ ನಂತರ ಶ್ರೀ. ಚಲಂ, ಈ ನಮ್ಮ ಕುಟುಂಬರಾಯರು ಇವರುಗಳ ಪ್ರಯತ್ನ ಯಶಸ್ವಿಯಾಗಲೆಂದು ನನ್ನ ಹಾರೈಕೆ. ಕಥಾವಸ್ತು ಓದುಗರಿಗೆ ಹೊಸತೆನಿಸಬಹುದು. ಆದರೆ ಜೀವನದ ಒಂದು ಬಗೆಯ ಚಿತ್ರ ತೀರ ಹೊಸದಾಗಲಾರದು. ಬೂದಿ ಮುಚ್ಚಿದ ಸ್ಥಳದಲ್ಲಿ ಕೆಂಡವಿರುವುದು ನಿಜ ತಾನೆ? ಇದು ಓದುಗರಿಗೆ ರುಚಿಸಿದರೆ, ವಿಮರ್ಶಕರಿಗೆ ಸರಿಯೆನಿಸಿದರೆ ಒಳಿತು. ನನಗೂ ಸಂತೋಷ. ಇದು ರುಚಿಸದೆ ಹೋದರೆ ಮುಂದೆ ಮತ್ತೊಮ್ಮೆ ಅವರಿಗೆ ರುಚಿಸುವಂತೆ ಬರೆಯಲು ಯತ್ನಿಸುವೆನು.

ಮೂಲ ಬರಹಗಾರನ, ಅನುವಾದಕನ ಉದ್ದೇಶವೇನೆಂಬುದನ್ನು ವಿಮರ್ಶಕರು ಕಾಣಲು ಯತ್ನಿಸಿದರೆ ನಮ್ಮ ಸಾಹಸಕ್ಕೆ ತಕ್ಕ ಪ್ರತಿಫಲ ದೊರೆತಂತೆ.

ಹುಬ್ಬಳ್ಳಿ, ೨೦-೩-೪೯. ಪಿ. ವೆಂಕೋಬಾಚಾರ್ಯ.

# ಎರಡನೆಯ ಮುದ್ರಣಕ್ಕೆ ಅನುವಾದಕರ ಮಾತು

೧೯೪೯ರಲ್ಲಿ ಅಂತರಂಗವು ವಾರಕ್ಕೊಂದು ಸಲ ಪ್ರಕಟವಾಗುವ ಸಮಯದಲ್ಲಿ "ಕುಲವಿಲ್ಲದ ಹೆಣ್ಣು" ಎಂಬ ಕಾದಂಬರಿ ಮೊದಲನೆಯ ಸಲ ಪ್ರಕಟವಾಗಿ ಆನಂತರ ಪುಸ್ತಕ ರೂಪದಲ್ಲಿ ಹೊರಬಿತ್ತು. ಇದನ್ನು ಬೆಳಕಿಗೆ ತಂದ "ನ ವ ಯು ಗ" (ಉಡುಪಿ) ಇದರ ಒಡೆಯರಾದ ಶ್ರೀ ಹೊನ್ನಯ್ಯ ಶೆಟ್ಟರಿಗೆ ನನ್ನ ವಂದನೆಗಳು. ಮತ್ತೊಮ್ಮೆ ಇದೀಗ ೨ನೇ ಆವೃತ್ತಿಯಾಗಿ ಪ್ರಕಟಿಸಲು ಮುಂದೆ ಬಂದ ಇದೇ ಮಿತ್ರರಿಗೆ ನಾನು ಋಣಿಯಾಗಿದ್ದೇನೆ.

ಈ ಐದು ವರುಷಗಳಲ್ಲಿ ಕನ್ನಡ ಕಾದಂಬರಿ ಪ್ರಪಂಚ ಊಹೆಗೆ ಮೀರಿ ಬೆಳೆಯುತ್ತಿದೆ. ವೇಶ್ಯಾ ಜೀವನವನ್ನು ಕುರಿತು, ಶ್ರೀ ಅ. ನ. ಕೃ, ತ. ರಾ. ಸು, ಮತ್ತು ಕಟ್ಟೀಮನೆಯವರೂ, ಅಲ್ಲದೆ ಶ್ರೀ ಕಾರಂತರೂ, ಮುಂತಾದವರುಗಳಿಂದ ಅನೇಕ ಕಾದಂಬರಿಗಳು ಹೊರಬಂದಿವೆ. ಇವುಗಳಲ್ಲಿ ಕೆಲವು ಶೀಲದ ಹದ್ದುಮೀರಿ ಕೇವಲ ಕಾಮಪ್ರಚೋದಕವೆಂದು ಅಪವಾದಕ್ಕೊಳಗಾಗಿವೆ. ಕೆಲವು ಜನರ ಮೆಚ್ಚುಗೆಯನ್ನೂ ಪಡೆದಿವೆ. ಶ್ರೀಕಾರಂತರ ಕಾದಂಬರಿಯನ್ನುಳಿದು, ಇತರ ಪುಸ್ತಕಗಳು ಈ ವೇಶ್ಯಾಜೀವನದ ಸಮಗ್ರ ಚಿತ್ರಗಳನ್ನು, ಹೆಚ್ಚಿನ ವಿವರಗಳನ್ನು ಒದಗಿಸಿದ್ದರೂ, ಇದರ ಪರಿಹಾರ ಮಾರ್ಗ ಯಾರೂ ಸೂಚಿಸಿಲ್ಲವೆಂದು ಕೆಲ ವಿಮರ್ಶಕರು ಅಭಿಪ್ರಾಯವಿತ್ತಿದ್ದಾರೆ. ಶ್ರೀ ಅ. ನ. ಕೃರವರ "ಸಂಜೆಗತ್ತಲಿನ" ಮುಂದಿನ ಭಾಗವು ಈ ಸಮಸ್ಯೆಯನ್ನು ಪೂರ್ಣ ಮಾಡುವುದೋ ಹೇಗೋ ನೋಡಬೇಕಾಗಿದೆ. ಏನೇ ಇರಲಿ ವೇಶ್ಯಾ ಜೀವನದ ಸಮಸ್ಯೆಯನ್ನು ನಿವಾರಿಸುವ ಯತ್ನದಿಂದ ಈ ಬಗೆಯ ಚಿತ್ರಣಗಳು ಕನ್ನಡದಲ್ಲಿ ಪ್ರಕಟವಾದುದು ಒಳ್ಳೆಯದೇ ಸರಿ. ಗ್ರಂಥಕರ್ತರು ವಹಿಸಿದ ಶ್ರಮ ಫಲಿಸಬೇಕಾದರೆ, ಜನ ಸಾಮಾನ್ಯರು ಮುಸುಗಿನಲ್ಲಿ, ತೆರೆಯ ಮರೆಯಲ್ಲಿ, ಮಾಡುವ ಅಶ್ಲೀಲ ವರ್ತನೆಯನ್ನು ಸಂಪೂರ್ಣ ತೊರೆದರಲ್ಲದೆ ಈ ಸಮಸ್ಯೆ ಬಗೆಹರಿಯುವುದಿಲ್ಲ. ಚಲಚಿತ್ರಗಳ ತಯಾರಿಕೆಯಲ್ಲಿ, ಈ ಯುಗದಲ್ಲಿ ನಾಟಕಗಳ ಪುನರುಜ್ಜೀವನಗೊಳ್ಳುವ ಈ

ಸಂಧಿ ಸಮಯದಲ್ಲಿ ಜನರಲ್ಲಿ ಸಾಧು ಸ್ವಭಾವ ಕೆಲಮಟ್ಟಿಗೆ ನೆಲೆಸಿರುವ ಈ ಕಾಲದಲ್ಲಿ, ಈ ತರಹದ ಮನೆತನಗಳು ನಿರ್ಮೂಲವಾಗ ತೊಡಗಿವೆ. ಇದೊಂದು ಶುಭ ಸೂಚನೆ. ಇಂಥ ಕುಲವೃತ್ತಿಗೆ ಎರವಾದ ಅನೇಕರ ಸಂತಾನಗಳು, ದಾಂಪತ್ಯ ಜೀವನಕ್ಕೆ ಮಾರು ಹೋಗಿ, ಸುಖದ ಬಾಳನ್ನು ಕಾಣುತ್ತಿರುವ ಚಿತ್ರಗಳು ನಮ್ಮೆದುರು ಬಂದು ನಿಲ್ಲುತ್ತಿವೆ. ಕ್ರಮೇಣ ಇಂಥ ನೀಚವೃತ್ತಿ ಮಾಯವಾಗುವುದೆಂದು ಎಲ್ಲರ ನಂಬಿಕೆಯಾಗಿದೆ.

ಇದರ ಜತೆಗೆ ಕುಲೀನರೆನಿಸಿಕೊಂಡ ಸಂಸಾರಿಗಳ ಜೀವನ ಕ್ರಮದಲ್ಲಿ ವ್ಯಭಿಚಾರವು ಮತ್ತೊಂದು ರೂಪದಲ್ಲಿ ತಲೆದೋರುತ್ತಿದೆ. ಇದನ್ನು ತ. ರಾ. ಸು.ರವರು, ತಮ್ಮ "ಬಿಡುಗಡೆಯ ಬೇಡಿ"ಯಲ್ಲಿಯೂ, ಅ. ನ. ಕೃ.ರವರು "ಹೊಸಲು ದಾಟಿದ ಹೆಣ್ಣು"ನಲ್ಲಿಯೂ ಚಿತ್ರಿಸಿರುವರು. ಇಂಥ ಅನೇಕ ಕಾದಂಬರಿಗಳು ಶೀಲದ ಮೇರೆಯನ್ನು ಮೀರದೆ ಚಿತ್ರಿಸಲ್ಪಟ್ಟರೆ, ಸಮಾಜಕ್ಕೆ ಒಳಿತೆನಿಸುತ್ತದೆ.

ಪ್ರಸ್ತುತ (ಕುಲವಿಲ್ಲದ ಹೆಣ್ಣು) ಕಾದಂಬರಿಯಲ್ಲಿ ಈ ಸಮಸ್ಯೆಯ ಪರಿಹಾರ ಒಂದು ಬಗೆಯಾಗಿ ಸೂಚಿಸಲ್ಪಟ್ಟಿದೆ. ವೇಶ್ಯಾವೃತ್ತಿಯನ್ನು ತ್ಯಜಿಸಲು ಹಾತೊರೆಯುವ ನೂತನ ಹೆಣ್ಣುಗಳನ್ನು ಇಂತಹ ಬಿಕ್ಕಟ್ಟಿನ ಪ್ರಸಂಗದಿಂದ ತಪ್ಪಿಸುವ ಕೆಲಸ ಯುವಕರನ್ನೇ ಅವಲಂಬಿಸಿದೆ. ಪ್ರಭಾಕರನೆಂಬ ಯುವಕ ಕುಸುಮಳನ್ನು (ಇವಳು ವೇಶ್ಯಾಕುಲವನ್ನು ತ್ಯಜಿಸಿ ಓರ್ವನನ್ನೇ ನೆಚ್ಚಿಕೊಂಡು ಬಾಳಿದಾಗ ಜನನವಾದ ಹೆಣ್ಣು) ನಿರ್ಭಯವಾಗಿ ಮದುವೆಯಾದ ಸನ್ನಿವೇಶ ಈ ಕಾದಂಬರಿಯಲ್ಲಿ ಚಿತ್ರಿಸಲ್ಪಟ್ಟಿದೆ.

ಇದನ್ನು ಎರಡನೆಯ ಸಲ ಮುದ್ರಿಸಲು ಸಾಹಸಮಾಡಿದ ನನ್ನ ಮಿತ್ರರಾದ ಶ್ರೀ ಹೊನ್ನಯ್ಯ ಶೆಟ್ಟರಿಗೆ ಮತ್ತೊಮ್ಮೆ ವಂದನೆಗಳನ್ನು ಸಲ್ಲಿಸುತ್ತೇನೆ. ಐದು ವರುಷಗಳ ನಂತರ ಕನ್ನಡ ಲೋಕವು ಈ ಕಾದಂಬರಿಯನ್ನು ಬರಮಾಡಿಕೊಂಡು ಆದರಿಸುವರೆಂದು ನಂಬಿದ್ದೇನೆ.

ಹುಬ್ಬಳ್ಳಿ,
೧೫-೧೨-೫೪.

ಪಿ. ವೆಂಕೋಬಾಚಾರ್ಯ,
ಗಾ. ಸಂ. ಆನಂದ ಗ್ರಂಥಮಾಲಾ.

# ಕುಲವಿಲ್ಲದ ಹೆಣ್ಣು

ಕುಸುಮಳು ತಾಯಿಲ್ಲದ ತಬ್ಬಲಿ. ತಾಯಿಯ ಸಾವು ಅವಳಿಗೆ ನೆನಪಿನಲ್ಲಿರಲಿಲ್ಲ. ಹಡೆದ ತಾಯಿಗಾಗಿ ಹೆಚ್ಚು ಪ್ರೀತಿ ತೋರಿಸುವ ಸುಯೋಗ ಅವಳಿಗೆ ದೊರೆಯಲಿಲ್ಲ. ಆಕೆಯ ಅಗಲುವಿಕೆಯ ದುಃಖದ ಅರಿವೂ ಆಗಿರಲಿಲ್ಲ. ತೀರ ಚಿಕ್ಕ ವಯಸ್ಸಿನಲ್ಲೇ ತಾಯಿ ಅಗಲಿದುದರಿಂದ ಕುಸುಮಳಿಗೆ ಜ್ಞಾನೋದಯವಾದಂತೆಲ್ಲ ಎಲ್ಲವನ್ನೂ ತಿಳಿದುಕೊಂಡಳು. ಅನೇಕ ವಿಷಯಗಳು ಅವಳನ್ನು ನಿರುತ್ಸಾಹಗೊಳಿಸಿದರೂ, ಧೈರ್ಯದಿಂದ ಎಲ್ಲವನ್ನೂ ಎದುರಿಸುವ ಶಕ್ತಿ, ಸಾಹಸ ಅವಳಲ್ಲಿದ್ದಿತು. ಕಷ್ಟನಷ್ಟಗಳನ್ನು ಸಹಿಸುವ ಶಕ್ತಿ ಕುಸುಮಳದಾಗಿತ್ತು. ಮುಪ್ಪಿನಲ್ಲಿ ತಂದೆಗೆ ಬೇಕಾದ ಶಾಂತತೆಯನ್ನು ತಂದುಕೊಟ್ಟು, ಆತನನ್ನು ಸಂತೈಸುತ್ತಿದ್ದಳು.

ಕುಸುಮಳ ಮದುವೆಯಾಗಿದ್ದರೆ, ತಂದೆ ಶ್ರೀಧರ ರಾಯನಿಗೆ ಯಾವ ಯೋಚನೆಯೂ ಇರುತ್ತಿರಲಿಲ್ಲ. ಕುಸುಮಳು ಚೆಲುವೆ. ಆದರೆ ಕಾಲೇಜಿಗೆ ಹೋಗಿ ಹೆಚ್ಚು ವಿದ್ಯೆ ಕಲಿತಿರಲಿಲ್ಲ. ಆದುದರಿಂದ ಅವಳ ಬಗ್ಗೆ ಬಹಳ ಜನಗಳಿಗೆ ತಿಳಿದಿರಲಿಲ್ಲ. ಮೆಟ್ರಿಕ್ಯುಲೇಷನ ವರೆಗೆ ಕಲಿಯದಿದ್ದರೂ, ಇಂಗ್ಲೀಷು, ಮತ್ತು ಮಾತೃಭಾಷೆಯ ಅರಿವು ಪೂರ್ಣ ಇತ್ತು. ವ್ಯವಹಾರ ಜ್ಞಾನವೂ ಇತ್ತು. ಶಾಲೆ ಪೂರ್ಣ ಕಲಿಯದೇ ಇದ್ದ ಮಾತ್ರಕ್ಕೆ ಇವಳು ಸುಸಂಸ್ಕೃತಳಾಗುವುದಕ್ಕೆ, ತಂದೆ ಎಲ್ಲ ವಿಧದಿಂದಲೂ ಪ್ರಯತ್ನಮಾಡಿದ್ದ. ಕು ಶ ಲ ಮ ತಿ ಯಾ ದ ಇವಳು ಯಾವ ಕಲಿತ ಹೆಣ್ಣನ್ನೂ ಮೀರಿಸುವಂತಿದ್ದಳು.

ಕುಸುಮಳಿಗೆ, ಹಿಂದೆ ಮುಂದೆ, ದೂರದ ಬಂಧುಗಳು ಯಾರೂ ಇರಲಿಲ್ಲ. ಅವಳ ತಾಯಿ ವೇಶ್ಯಾಕುಲಕ್ಕೆ ಸೇರಿದವಳು; ಆದರೆ ವೇಶ್ಯ ಕುಲವೃತ್ತಿ ಮಾಡಿ ಅರಿಯಳು. ತಂದೆ ಶ್ರೀಧರರಾಯ ಬ್ರಾಹ್ಮಣ. ಹೀಗಿರುವಾಗ ಕುಸುಮಳದು ಯಾವ ಕುಲ? ಹಣವಿದ್ದರೆ ಹೆಣವು ಸಹಾ

ಬಾಯಿಬಿಡುವುದೆಂಬಂತೆ ಹಣವಂತನಾದವನಿಗೆ ಎಲ್ಲರೂ ನೆರವಾಗುವರು. ಅವನಲ್ಲಿಯ ಲೋಪದೋಷಗಳನ್ನು ಲಕ್ಷಿಸುವುದಿಲ್ಲ. ಹಣವಿಲ್ಲದವರ ಬಾಳು ಹಾಳು; ಬೀಳು ಬಿದ್ದಂತಿರುವ ಇವರ ಮನೆ ಹೊಸ್ತಿಲನ್ನು ಯಾರೂ ತುಳಿಯರು. ದಾರಿದ್ರ್ಯದೊಂದಿಗೆ ಈ ರೀತಿಯ ಜನಾಂಗಗಳನ್ನು ಆದರಿಸುವವರು ಕಡಮೆ. ಕುಲವಿಲ್ಲದವರೆಂದು ನಿರ್ಣಯಿಸಲ್ಪಟ್ಟ ಇಂತಹ ಜನರನ್ನು ಆದರಿಸಲು ಯಾರೂ ಮುಂದೆ ಬರುವುದಿಲ್ಲ. ಸಮಾಜ ಇವರ ಬಗ್ಗೆ ಹೆಚ್ಚಿನ ಬಹಿಷ್ಕಾರ ಹಾಕಿರುತ್ತದೆ. ಇಂತಹ ಜನರ ಜನ್ಮಕ್ಕೆ ಕಾರಣರಾದವರು ಎಷ್ಟು ಶೀಲವಂತರೇ ಆಗಿರಲಿ, ಗಂಡ ಹೆಂಡಿರಂತೆ, ಕುಲೀನ ಮನೆತನದವರಂತೆ ಕಾಲಕಳೆದರೂ, ಅನ್ಯೋನ್ಯ ಪ್ರೇಮದಿಂದ ಕಳಂಕವಿಲ್ಲದೆ ಮಕ್ಕಳನ್ನು ಹಡೆದಿದ್ದರೂ, ಸಮಾಜವು ಅವರನ್ನು ಗೌರವಿಸುವುದಿಲ್ಲ. ವಿಧಿ ಅವರಿಗೆ ಮಾನವ ಕುಲದಲ್ಲಿ ಜನ್ಮವೆತ್ತಲು ದಯೆ ತೋರಿದ್ದರೂ, ಅವರ ವೃತ್ತಿಗೆ ಎಂದೋ ಅಂಟಿಕೊಂಡಿದ್ದ ಕಳಂಕವು ಜನ್ಮ ಜನ್ಮಾಂತರಗಳು ಕಳೆದರೂ ಅಳಿಯುವುದು ಆಗದ ವಿಷಯ.

ಇಷ್ಟಾದರೂ ಶ್ರೀಧರ ರಾಯನಿಗೆ ಕುಸುಮಳ ಮುಂದಿನ ಜೀವನದ ರೀತಿ ಸಮಸ್ಯೆಯಾಗಿ ಉಳಿಯಿತು. ಅವನು ಜೀವಂತ ಇರುವ ವರೆವಿಗೂ ಯಾವ ತೊಂದರೆಯೂ ಇಲ್ಲ. ಸಾಕಷ್ಟು ಹಣವಿದೆ; ಇರಲು ಮನೆ ಇದೆ. ಆದರೆ ಅಕಸ್ಮಾತ್ ಸತ್ತರೆ ಕುಸುಮಳಿಗೆ ಯಾರನೆರವೂ ಸಿಗುವಂತಿರಲಿಲ್ಲ. ಅವಳೊಬ್ಬಳೇ ಜೀವಿಸುವಳೆಂಬ ಧೈರ್ಯವಿಲ್ಲವೆಂದು ಶ್ರೀಧರನ ತಿಳುವಳಿಕೆ. ಹೆಂಡತಿ ಸತ್ತ ಮೇಲೆ ಕುಸುಮಳ ತಂದೆಗೆ ಎದೆಜೇನೆ ಮನೆ ಮಾಡಿಕೊಂಡಿತ್ತು. ಇತ್ತ ಮಗಳ ಭವಿಷ್ಯದ ಯೋಚನೆ, ಅತ್ತ ತನ್ನ ಆರೋಗ್ಯದ ಪರಿಸ್ಥಿತಿ, ಎರಡೂ ಸೇರಿ ಇವನನ್ನು ಹಣ್ಣುಮಾಡಿದ್ದವು. ಇದೆಲ್ಲವನ್ನೂ ಸೂಕ್ಷ್ಮರೀತಿಯಿಂದ ತಿಳಿದು ಕುಸುಮಳು ತಂದೆಗೆ ನೋವಾಗದಂತೆ ನಡೆದುಕೊಂಡು ಹೋಗುತ್ತಿದ್ದಳು.

ಈ ನೋವಿನೊಂದಿಗೆ ಕುಸುಮಳು ಬೆಳೆದು ನಿಂತಿದ್ದುದರಿಂದ ಅವಳ ಮದುವೆಯಪ್ರಶ್ನೆ ಹೆಚ್ಚಿನ ಸಮಸ್ಯೆಯಾಗಿಯೇ ಉಳಿಯಿತು. ಶ್ರೀಧರನು ಎಳೆವಯಸ್ಸಿನಲ್ಲಿ ಸಮಾಜವನ್ನು ಲೆಕ್ಕಿಸದೆ, ಸೂಳೆಯ ಜಾತಿಗೆ ಸೇರಿದ ನಿಷ್ಕಳಂಕ ಜೀವಿಯೊಂದನ್ನು ಮದುವೆಯಾದ. ತಂದೆ

ಮನೆಯವರು, ಮಿತ್ರರು, ಎಲ್ಲರೂ ಬಹಿಷ್ಕರಿಸಿದರೂ ತಾನು ಪ್ರೀತಿಸಿದ ಹೆಣ್ಣಿನೊಂದಿಗೆ ಹೊಂದಿಕೊಂಡು ನಡೆಸಿದ ಜೀವನವು ಪವಿತ್ರಮಯ ವಾಗಿದ್ದಿತು. ಅವಳಲ್ಲಿ ಕಂಡುಬಂದ ಉತ್ತಮ ಗುಣಗಳು ಇನ್ನಿತರ ಕುಲೀನರೆನಿಸಿಕೊಂಡ ಹೆಣ್ಣುಗಳಲ್ಲಿ ಕಾಣುವುದು ಕಷ್ಟವೆನಿಸಿತ್ತು. ರಾಯನು ಧೈರ್ಯದಿಂದ ಇದೆಲ್ಲವನ್ನೂ ಲೆಕ್ಕಿಸದೆ, ಕುಸುಮಳ ತಾಯಿ ಯೊಂದಿಗೆ ಮದುವೆಮಾಡಿ ಕೊಂಡವನಂತೆ ಜೀವನ ನಡೆಸಿದ. ಬಹಿ ರಂಗದಲ್ಲಿ ಇವರ ಮದುವೆ ನಡೆದುದರ ಕುರುಹುಗಳೇನೂ ಕಂಡು ಬರ ದಿದ್ದರೂ, ಮನಸಾ ಇವರ ಜೀವನ ಇಡಿಗಾಳಿನಂತೆ ಒಂದಾಗಿ ಹೊಂದಿ ಕೊಂಡು ನಡೆದಿತ್ತು. ಇವರಿಬ್ಬರ ಜೀವನ ಬಹು ಸುಖಮಯವಾಗಿತ್ತು. ಆದರ್ಶವಾಗಿತ್ತೆಂದರೆ ತಪ್ಪಲ್ಲ.

ಒಂದು ದಿನ ಕುಸುಮಳ ತಾಯಿ ಶ್ರೀಧರನಲ್ಲಿ ಮುಂದೆ ತಮ್ಮ ಸಂತತಿಗೆ ಬರಬಹುದಾದ ಕಳಂಕದ ಒಗ್ಗೆ ಸೂಚಿಸಿದಾಗ "ಯಾರೇನು ಮಾಡುವರು? ದೇವರ ಕಣ್ಣಿನಲ್ಲಿ ನಮ್ಮ ಜೀವನವು ಕಳಂಕರಹಿತವಾಗು ಳಿದರೆ ತೀರಿತು. ಕೊನೆಗೆ ನಾವು ಹೊಣೆಯಾಗಿರಬೇಕಾದುದು ದೇವ ರಿಗೆ ತಾನೇ! ದೇವರೆದುರಿಗೆ ತಪ್ಪು ಮಾಡದ ನಾವು ಕುರುಡು ಸಮಾಜ ವನ್ನೇತಕ್ಕೆ ಲೆಕ್ಕಿಸಬೇಕು? ಮುಸುಗಿನಲ್ಲಿ, ಸಮಾಜದ ಹೆಸರಿನಲ್ಲಿ ಮೂಢರು ಮಾಡುತ್ತಿರುವ ಅನ್ಯಾಯಗಳಿಗೆ ಹೊಣೆ ಯಾರು? ನಮ ಗೇಕೆ ಭಯ? ನಮ್ಮ ಸಂತತಿ ಮನಸ್ಥೈರ್ಯದಿಂದಲೂ, ಸತ್ಪ್ರವರ್ತನೆ ಯಿಂದಲೂ ಎಲ್ಲ ಎಡರು ತೊಡರುಗಳನ್ನು ಎದುರಿಸಿ ವಿಜಯಿಗಳಾಗುವ ಶಕ್ತಿ ಪಡೆಯುವುದು" ಎಂದು ಅಂದು ಹೇಳಿದ ಮಾತುಗಳನ್ನು ನೆನಪಿಗೆ ತಂದುಕೊಂಡು ಸಮಾಧಾನ ಪಡುತ್ತಿದ್ದ.

ಅಂದು ಗರ್ವದಿಂದ ಆಡಿದ ಮಾತಿನ ಪ್ರತಿಫಲ ಇಂದು ಅನುಭವಿ ಸುತ್ತಿರುವಂತೆ ಅವನಿಗನಿಸಿತು. ಆ ಮಾತುಗಳು ತಿಳಿವಳಿಕೆ ಇಲ್ಲದೆ ಆಡಿದವುಗಳೆಂದು ಈಗ ಮನವರಿಕೆಯಾಗ ತೊಡಗಿತು. ಹೀನವೆಂದು ಕುರುಡೆಂದು ಹೀಯಾಳಿಸಿದ ಸಮಾಜವು ಇಂದು ಆದರಿಸತಕ್ಕದೆಂದು ಮನವರಿಕೆ ಆಯಿತು. ಅದೇ ಸಮಾಜವೇ ತನ್ನ ಕುಸುಮಳಿಗೆ ಈಗ ಮಾರ್ಗ ತೋರಬೇಕಾಗಿದೆ; ಒಂದು ಸ್ಥಾನವನ್ನೀಯಬೇಕಾಗಿದೆ. ಸರಿ

ಯಾದ ರೀತಿಯಲ್ಲಿ ನಡೆದುಕೊಂಡರೆ, ಸಮಾಜವು ಹೆಚ್ಚಿನ ಸಹಾಯ ಮಾಡಬಹುದು. ಆದರೆ ಹಾಗೆ ಮಾಡಲು ಅದು ಮುಂದು ಬರುವುದೆ? ಕುಸುಮಳನ್ನು ಯಾವ ಆತಂಕವೂ ಇಲ್ಲದೆ ಬರಮಾಡಿಕೊಳ್ಳುವುದೆ? ಇಪ್ಪತ್ತು ವರುಷಗಳ ಹಿಂದೆ, ಪಾಪವೆಂದು ಇತರರಿಂದ ಪರಿಗಣಿಸಲ್ಪಟ್ಟ, ಓರ್ವ ಅನಾಥ ಹೆಣ್ಣನ್ನು ಉದ್ಧಾರ ಮಾಡಿದ ಪುಣ್ಯ ಕೆಲಸಕ್ಕೆ ಈಗ ಜನರಿಂದ ಮನ್ನಣೆ ದೊರೆಯುವುದೆ? ಅಂದು ಅವನು ಸಮಾಜದ ವಿರುದ್ಧ ನಡೆದುದಕ್ಕೆ, ಇಂದು ಕುಸುಮಳು ಶಿಕ್ಷೆಯನ್ನನುಭವಿಸಬೇಕಾಗಿದೆ.

"ಇದು ಪರಮ ಅನ್ಯಾಯ, ಸಹಿಸಲಾರದ ಅನ್ಯಾಯ" ಎಂದು ರಾಯನು ಮನದೊಳಗೆ ನೆನೆದನು. ಆದರೆ ಮನಸ್ಸಿಗೆ ನ್ಯಾಯವೆಂದು ತೋರಿದ ವಿಷಯ ಸಮಾಜ ಸಮರ್ಥಿಸುವುದಿಲ್ಲವೆಂದು ಅವನಿಗೆ ತಿಳಿದಿತ್ತು. ಕಾರಣವಿಲ್ಲದೆ ಈ ಬಗೆಯಾಗಿ ಸುಮ್ಮನೆ ಪೇಚಾಡಿಕೊಂಡ.

ಈಗ ರಾಯನು ಆತ್ಮವಿಮರ್ಶೆ ಮಾಡಿಕೊಳ್ಳ ತೊಡಗಿದ. ಅಂದು ಅವನು ಮಾಡಿದ ಕಾರ್ಯ ಬಹಳ ನೀಚವೆ? ಹೀನ ಕಾರ್ಯವೆ? ಸಮಾಜ ವಿರುದ್ಧವಾದರೂ ಅನ್ಯಾಯವೆ? ಅಪರಾಧವೆ? ಪಶ್ಚಾತ್ತಾಪದಿಂದ ತಾನು ಈ ಕುತ್ತಿನಿಂದ ದೂರಾಗುವುದಿದ್ದರೆ ತನ್ನ ತಪ್ಪನ್ನು ಒಪ್ಪಿಕೊಳ್ಳಲು ಸಿದ್ಧನೇ. ಆದರೆ ಆ ಕಾರ್ಯವನ್ನು ಸಮಾಜ ಮನ್ನಿಸದಿದ್ದರೂ, ನಿರ್ಬಲಳಾದ ಓರ್ವ ಹೆಣ್ಣನ್ನು ಪಾಪಕೂಪದಿಂದ ತಪ್ಪಿಸಿದುದು, ಒಂದು ನೊಂದಜೀವವನ್ನು ಉದ್ಧರಿಸಿದುದು ತಪ್ಪಾಗಲಾರದೆಂದು ಮರುಕ್ಷಣದಲ್ಲಿ ಅವನ ಮನೋ ನಿಶ್ಚಯ ಹೇಳುತ್ತಿತ್ತು. ಈ ಹೊಯ್ದಾಟದಲ್ಲಿ ಸಿಕ್ಕು ರಾಯನ ಮನಸ್ಸು ಹಣ್ಣಾಗಿ ಹೋಗಿತ್ತು.

ಮತ್ತೆ ಯೋಚಿಸಿದ. ಕುಸುಮಳ ತಾಯಿಯನ್ನು ಮದುವೆಯಾದ ಹೆಣ್ಣಿನಂತೆ ಆಳಿದು ಜೀವಿಸಿದುದು ಅಪರಾಧವೆ? ವೇಶ್ಯಾವೃತ್ತಿಯಲ್ಲಿ ಕಾಲಿಡಲಿದ್ದು, ಇಡೀ ಜೀವನವನ್ನೇ ಪಾಪಮಯವಾಗಿಸಿ, ವಿನಾಶದ ಪಥವನ್ನು ಅನುಸರಿಸುತ್ತಿದ್ದ ಓರ್ವ ಯುವತಿಯನ್ನು ಇಂತಹ ವಿಪತ್ತಿನಿಂದ ಕಾಪಾಡಿದುದು ತಪ್ಪೇ? ಇದು ಪಾಪದ ಕೆಲಸವೆ? ಸಮಾಜವು ಕೋಪಿಸಿಕೊಳ್ಳಬೇಕೆ? ಬಹಿಷ್ಕರಿಸಬೇಕೆ? ಸಮಾಜ ಸುಧಾರಕರು "ಈ ಜನಾಂಗವನ್ನು ಸುಧಾರಿಸಬೇಕು; ಅವರ ಜೀವನ ಕ್ರಮದ ಅಂತಸ್ತನ್ನು

ಎತ್ತಬೇಕು," ಎಂದು ಆಡಿದ ಮಾತುಗಳು, ದೊಡ್ಡ ಸಭೆಗಳಲ್ಲಿ ನುಡಿದ ದೊಡ್ಡ ಭಾಷಣಗಳ ಅರ್ಥವೇನು? ಹೀಗೆ ಉದ್ದುದ್ದ ಮಾತನಾಡಿದವರ ರೀತಿ ನೀತಿಗಳನ್ನು ವಿಚಾರಿಸಿದರೆ ಅವರ ಜೀವನದ ಗುಟ್ಟು ಬಯಲಾಗುವುದು. ಇವು ಕೇವಲ ತುಟಿಯ ಕೊನೆಯಿಂದ ಹೊರಬಿದ್ದ ಪೊಳ್ಳು ಮಾತುಗಳೆಂದು ತಿಳಿದು ಬರುವುವು. ಈ ಬಗೆಯ ಡಾಂಭಿಕ ವರ್ತನೆ ಖಂಡಿಸತಕ್ಕುದೇ?

ಆದರೆ ಯಾರು ದಂಡಿಸುವವರು? ಸುಳ್ಳು, ತಂಟೆ, ತರಲೆಗಳಿಗೆ ನೆಲೆಯಾಗಿರುವ ಈಗಿನ ಸಮಾಜದಲ್ಲಿ ನೀತಿಗೆ ಬೆಲೆಯುಂಟೇ? ಆದರೆ ಸತ್ಯಕ್ಕೆ ಅಪಜಯವಿಲ್ಲ. ಗೆಲುವೆಂದಿಗೂ ಖಂಡಿತವೇ.

ಅಂದು ರಾತ್ರಿ ತನ್ನ ಮನೆಯಲ್ಲಿ ಕುಸುಮಳ ತಾಯಿಯನ್ನು ಕೇವಲ ಮೊದಲನೆಯ ಸಲ ಕಂಡ ಸನ್ನಿವೇಶ ರಾಯನ ನೆನಪಿಗೆ ಬಂತು. ರಾತ್ರಿ ಹನ್ನೊಂದರ ಸಮಯ- ರಾಯನು ತನ್ನ ಮನೆಯ ಹೊರಗಿನ ಕೋಣೆಯಲ್ಲಿ ಮಲಗಿದ್ದನು. ಕೋಣೆಯ ಬಾಗಿಲು ಯಾರೋ ಮೆಲ್ಲನೆ ತಟ್ಟಿದಂತೆನಿಸಿತು. ಬಾಗಿಲು ತೆರದ ಕೂಡಲೇ ಕುಸುಮಳ ತಾಯಿ ಅವಸರದಿಂದ ಕೋಣೆಯೊಳಗೆ ಬಂದು ಬಾಗಿಲು ಹಾಕುವಂತೆ ಸನ್ನೆ ಮಾಡಿದಳು. ವೇಶ್ಯಾವೃತ್ತಿಯಲ್ಲಿದ್ದ, ಬೆಳೆದ ಕುಸುಮಳ ತಾಯಿಯ ಪರಿಚಯ ರಾಯನಿಗಿತ್ತು. ಕುಸುಮಳ ತಾಯಿಯೂ ರಾಯನನ್ನು ಕಂಡು ಅರಿತಿದ್ದಳು. ಸಣ್ಣ ವಯಸ್ಸಿನಿಂದ ಇವರೀರ್ವರ ನಡುವೆ ಅಗೋಚರವಾಗಿ ಬೆಳೆದು ಬಂದ ಪ್ರೇಮ ದಿನೇದಿನೇ ಬೆಳೆಯುತ್ತಿತ್ತು. ಇದು ಈ ಮಿಲನದ ಹಿನ್ನೆಲೆ.

ಅವಳು ಬಂದು ತಲೆತಗ್ಗಿಸಿ ನಿಂತುದನ್ನು ಕಂಡು ರಾಯನು "ಏನಿದು?" ಎಂದು ಕೇಳಿದ.

ಅವಳ ಕಣ್ಣಲ್ಲಿ ನೀರು.

"ಈ ಹೊತ್ತಿಗೆ ನನ್ನಲ್ಲಿ ನಿನಗೇನು ಕೆಲಸ?"

ಕುಸುಮಳ ತಾಯಿಯು ಗದ್ಗದ ದನಿಯಲ್ಲಿ "ನಾಳೆ ಈ ಹೊತ್ತಿಗೆ ನಾನು ಅಪವಿತ್ರಳಾಗಿ ಹೋಗುವ ಸಂಭವವಿದೆ. ನಿಮ್ಮವಳಾಗಬೇಕೆಂದು ನನ್ನ ಹಂಬಲವಿದೆ. ಎಂದಿನಿಂದಲೋ ನಿಮ್ಮನ್ನು ಪ್ರೀತಿಸುತ್ತಿದ್ದೇನೆ.

ನಿಮ್ಮ ಸತ್ಯಪರ ಜೀವನದ ಅರಿವು ನನಗೆ ತಿಳಿದಿದೆ. ನನ್ನ ಜೀವ, ದೇಹ, ನಿಮ್ಮದು; ಅದನ್ನು ಕಾಪಾಡುವ ಭಾರ ನಿಮ್ಮದು" ಎಂದು ಹೇಳಿ ಸುಮ್ಮನಾದಳು.

ಇಂತಹ ಸನ್ನಿವೇಶ ಕತೆ ಕಾದಂಬರಿಗಳಲ್ಲಿ ಓದಿದ್ದ. ಕನಸುಗಳಲ್ಲಿ ಮಾತ್ರ ಹೀಗಾಗುವುದೆಂದು ಕೇಳಿದ್ದುಂಟು. ಅದರ ಪ್ರತ್ಯಕ್ಷ ಅನುಭವವಾದುದು ಆಶ್ಚರ್ಯವೆನಿಸಿತು. ನೀಚವೃತ್ತಿಯಿಂದ ದೂರಿದ್ದು, ತಾನೂ ಸಂಸಾರಿಯಂತಿರಬೇಕೆಂದು ನೆನೆಯುವುದು ಶ್ರೀಧರನ ಮುಂದೆ ಆಗ ನಿಂತಿದ್ದ ಕುಸುಮಳ ತಾಯಿಯ ತಪ್ಪಲ್ಲ. ಸೂಳೆಯಾದ ಮಾತ್ರಕ್ಕೆ, ಅವಳಿಗೆ ಹೃದಯವಿಲ್ಲವೆ? ಸ್ವಚ್ಛಂದವಾಗಿ ಮದುವೆಯಾಗಿ ಎಲ್ಲ ಕುಲೀನ ಸ್ತ್ರೀಯರಂತಿರಲು ಅವಳಿಗೆ ಅವಕಾಶವಿಲ್ಲವೆ? ಯಾವ ಪಾಪವನ್ನೂ ಅರಿಯದ ಅವಳ ಜೀವನವು ಪವಿತ್ರಮಯವಾಗುಳಿಯಲಾರದೆ? ಅವಳು ತನ್ನ ಕುಲದವರಿಗೆ ಆದರ್ಶ ಸ್ತ್ರೀಯಾಗಲು ಸಾಧ್ಯವಿಲ್ಲವೆ? ಇಂತಹ ಪ್ರಗತಿಪರ ಪಥವನ್ನು ಹಿಡಿಯಲು ಸಾಹಸ ಮಾಡಿರುವಾಗ ಗಂಡುಸೆಂದು ಹೆಮ್ಮೆ ಪಡುವವನು ಅವಳ ಆಕಾಂಕ್ಷೆಯನ್ನು ಪೂರೈಸಲು ಸಹಾಯಕನಾಗದೆ ಹೇಡಿಯಾಗುಳಿಯುವುದು ಉಚಿತವೆ? ಸುಮ್ಮನಿರುವುದು ಪಾಪವಲ್ಲವೆ? ನೀಚತನವಲ್ಲವೆ? ಹೇಡಿಯಂತೆ ಸುಮ್ಮನಿರುವದು ಲಕ್ಷಣವೆ?

ಇಂತಹ ಸನ್ನಿವೇಶದಲ್ಲಿ ಶ್ರೀಧರನಿಗೇನು ಮಾಡಬೇಕೆಂಬುದು ತೋಚದಾಯಿತು. ತಾನು ದುಡುಕಿ ಇವಳಿಗೆ ಆಶ್ರಯವನ್ನಿತ್ತರೆ, ಮುಂದೇನಾಗಬಹುದೆಂಬ ಯೋಚನೆ ಅವನಿಗೆ ಹೊಳೆಯಲೇ ಇಲ್ಲ. ಶರಣುಬಂದ ಹೆಣ್ಣಿನ ಕೈ ಹಿಡಿದು ಅವಳನ್ನುದ್ಧರಿಸುವುದೇ ಉಚಿತವೆನಿಸಿತು.

ಅವಳ ಕಡೆ ನೋಡಿದ. ತನ್ನ ಆಶ್ರಯವನ್ನು ಬೇಡ ಬಂದ ಆ ಹೆಣ್ಣಿನ ಹೃದಯ ನಿರ್ಮಲವೆನಿಸಿತು. ಅವಳ ವರ್ತನೆ ನೀತಿಮಯವೆಂದು ಕಂಡುಬಂತು. ಅವಳ ಕಣ್ಣುಗಳಲ್ಲಿ ನಿಷ್ಕಳಂಕಮಯ ದೃಷ್ಟಿ ಇತ್ತೆಂದು ಭಾಸವಾಯಿತು. ದೈನ್ಯತೆಯ, ಅಮಾಯಕತೆಯ ನೋಟ ಅವನನ್ನು ಮುಗ್ಧಗೊಳಿಸಿತು. ಏಕಾಂತದಲ್ಲಿಯ ಅವಳ ಮೌನ, ದೀಪದ ಬೆಳಕಿನಲ್ಲಿ ಮಿನುಗುವ ಅವಳ ಚೆಲುವು, ಆ ಸುಸನ್ನಿವೇಶ, ಎಲ್ಲ

ಪಕ್ಕೊ ಮಿಗಿಲಾದ ಅವಳ ಆ ಪ್ರೇಮದ ಕರೆ, ಅವನನ್ನು ವೈಮರೆಯು ವಂತೆ ಮಾಡಿತು. ಇವಳನ್ನು ಕೈ ಹಿಡಿದು, ತನ್ನವಳನ್ನಾಗಿಸಿಕೊಂಡರೆ ತಾನೊಂದು ಘನವಾದ ಉಪಕಾರ ಮಾಡಿದವನಾಗುವೆನೆಂದು ಅವನ ಮನಸ್ಸು ಹೇಳಿತು. ದಯಾ ಭಿಕ್ಷೆಯನ್ನು ಬೇಡಲು ಬಂದವಳಿಗೆ ಇಲ್ಲವೆನ್ನುವ ಧೈರ್ಯ ಅವನಿಗಾಗಲಿಲ್ಲ. ಈ ರೀತಿಯ ವರ್ತನೆಯಿಂದ ತಾನು ಎಲ್ಲರಿಂದಲೂ ಬಹಿಷ್ಕೃತನಾಗಿ ಕಷ್ಟಕ್ಕೊಳಗಾಗಬೇಕೆಂಬುದು ಅವನಿಗೆ ತಿಳಿದ ವಿಷಯ. ಆದರೂ ಅವಳ ದೀನಾವಸ್ಥೆಯನ್ನು ಕಂಡು ಅವನ ಮನಸ್ಸು ನೀರಾಯಿತು. ಅವಳಿಗೆ ನೆರವಾಗುವುದೇ ಉಪಕಾರದ ಕೆಲಸವೆಂದು ನಿರ್ಧರಿಸಿದ; ಸಮಾಜವನ್ನು, ಮನೆಯವರನ್ನು ಎದುರಿಸುವ ಧೈರ್ಯಮಾಡಿದ.

ಅಂದು ರಾತ್ರಿ ಅವಳಿಗೆ ಆಶ್ರಯವನ್ನಿತ್ತ. ಮಾರನೆಯದಿನ ಅಜ್ಞಾನದ ಸೋಗು ಹಾಕಲು ಅವನಿಗೆ ಇಷ್ಟವಿರಲಿಲ್ಲ. ಆಕೆ ರಾಯನಿಗೆ ಶರೀರವನ್ನು, ಮನಸ್ಸನ್ನು, ಎಲ್ಲದಕ್ಕಿಂತಲೂ ತನ್ನಾತ್ಮವನ್ನೇ ಅರ್ಪಿಸಿದ ನಂತರ ಅವಳನ್ನು ದೂಡಿ ಬಿಡುವುದಾದರೂ ಹೇಗೆ? ಹೀಗೆ ಮಾಡುವುದು ಮಾನವ ಕುಲಕ್ಕೆ ಕಳಂಕವಲ್ಲವೆ? ಹೆಣ್ಣಾಗಿ ಹುಟ್ಟಿ, ಪ್ರೀತಿಸಿದವನನ್ನು ಮದುವೆಯಾಗಿ ಮಾನವನ್ನು ಕಾಪಾಡಿಕೊಂಡು ಕುಲೀನರಂತೆ ಜೀವಿಸುವ ಸಂಧಿ ವೇಶ್ಯ ಜಾತಿಯಲ್ಲಿ ಹುಟ್ಟಿದ ಸ್ತ್ರೀಯಳಿಗೆ ಹಕ್ಕಿಲ್ಲವೆ? ವಿಧಿ ಇತ್ತ ಕುಲ ಡೊಂಕಾದರೆ ಅವಳ ಆತ್ಮ ಡೊಂಕಾಗಬಲ್ಲುದೆ? ಪ್ರೀತಿಯು ನಿರ್ಮಲವಾಗಿರಲಾರದೆ? ಪ್ರೀತಿಗೆಲ್ಲಿಯ ಡೊಂಕು?

ಕುಸುಮಳ ತಾಯಿ ಶ್ರೀಧರನಿಗೆ ಎಲ್ಲ ಬಗೆಯ ಸ್ವಾತಂತ್ರ್ಯವನ್ನು ಕೊಟ್ಟಿದ್ದಳು. ತಾನು ಮನೆಯ ಕೆಲಸದವಳಂತೆ, ತನ್ನ ಮಾನವನ್ನು ಕೆಡದಂತೆ ಅನುವಾಗಲು ಮಾತ್ರ ಶ್ರೀಧರನ ಸಹಾಯ ಬೇಡಿದಳು. ಬೇಕಾದರೆ ಬೇರೊಂದು ಮದುವೆಯಾಗಿ ಸುಖದಿಂದ ಇರಬಹುದೆಂದು ಸೂಚಿಸಿದಳು. ಆದರೆ ತಾನು ಮಾತ್ರ ಅವನಿಂದ ದೂರಇರಲಾರೆ ಎಂದು ಹೇಳಿದಳು. ಅವನಿಂದ ಅಗಲುವುದೆಂದರೆ ಪ್ರಾಣ ಹೋದ ಮೇಲೆ ಎಂದು ಸ್ಪಷ್ಟ ಹೇಳಿದಳು ಅವಳಿಗೆ ಬೇಕಾದುದು ಶ್ರೀಧರನ ಪ್ರೇಮಾಶ್ರಯ.

ತನ್ನನ್ನು ನಂಬಿ ಪೂರ್ಣ ವಿಶ್ವಾಸವಿಟ್ಟ ಹೆಣ್ಣಿಗೆ ಮೋಸ ಮಾಡುವ ನೀಚತನ ಶ್ರೀಧರನಲ್ಲಿರಲಿಲ್ಲ. ಮುಂದಿಟ್ಟ ಹೆಜ್ಜೆ ಹಿಂದೆ ತೆಗೆದುಕೊಳ್ಳುವ ಹೇಡಿತನ ಅವನದಲ್ಲ.

ಇದರಿಂದ ಸಮಾಜ ಇವರಿಬ್ಬರನ್ನು ಬಹಿಷ್ಕರಿಸಿತು. ಎಲ್ಲರೂ ದೂರ ಸರಿದರು. "ಮುಂದೇನು? ಮುಂದೇನು" ಎಂದು ಯೋಚಿಸಿದವರುಂಟು. "ಪಾಪ ಅವರ ಗತಿ ಏನು?" ಎಂದು ಹೊರಗೆ ಮಾತ್ರ ಕನಿಕರ ತೋರಿದವರೂ ಇದ್ದರು.

"ಗಂಡ ಸಂಪಾದಿಸದಿದ್ದರೆ, ಹೆಂಡತಿ ತನ್ನ ವೃತ್ತಿಯಿಂದ........" ಎಂದು ಹಾಸ್ಯ ಮಾಡಿದರು ಕೆಲವರು. "ಈಗೇನು ಬಂತು? ನಾಳೆ ಮತ್ತೊಬ್ಬನ ಹಿಂದೆ ಓಡಿಹೋದಾಗ ಎಲ್ಲವೂ ತಿಳಿಯುವುದು" ಎಂದು ಕೊಂಕು ನುಡಿ ಆಡಿದವರೂ ಉಂಟು. ಇಂತಹ ನೀಚಮಾತುಗಳನ್ನಾಡಿದ ಜನದ ಬಾಯಿ ಮುಚ್ಚುವವರಾರು? ಇವರಿಗೆ ಯಾವ ಶಿಕ್ಷೆಯೂ ಇಲ್ಲ.

"ಕುಸುಮಳಿಗೇನು ಭಯ? ಕಾಲ ಬದಲಾಯಿಸಿದೆ. ಜನರಲ್ಲಿ ಸಂಸ್ಕೃತಿ ಹೆಚ್ಚಿದೆ. ಯುವಕರನೇಕರು ಹೊಸ ಮಾರ್ಗವನ್ನನುಸರಿಸಿ ತಮ್ಮ ಹಳೆಯ ರೀತಿ ನೀತಿಗಳಲ್ಲಿ ವಿಶ್ವಾಸವಿಡದೆ ಪ್ರಗತಿಪರ ಜೀವನ ನಡೆಸುತ್ತಿರುವುದರಿಂದ, ಯಾವನಾದರೂ ಬಂದು ನನ್ನ ಸುಶಿಕ್ಷಿತ ಮಗಳನ್ನು ಮದುವೆಯಾಗಬಹುದು. ಆದರೆ ನನ್ನ ಮಗಳು ಜನರಲ್ಲಿ ಬೆರೆತು ಅನೇಕರ ಪರಿಚಯ ಮಾತ್ರ ಮಾಡಿಕೊಳ್ಳಬೇಕು. ಇಂತಹ ಸನ್ನಿವೇಶಗಳನ್ನು ನಾನವಳಿಗೆ ಕಲ್ಪಿಸಿ ಕೊಡಬೇಕು. ನಾನು ಬಹಳ ಯೋಚಿಸಿ ಪ್ರಯೋಜನವಿಲ್ಲ. ಕುಸುಮಳ ಜಾಣತನವೇ, ಅವಳ ಧೈರ್ಯ ವರ್ತನೆಯೇ ಮುಂದೆ ಅವಳ ಜೀವದ ಗೆಳೆಯನನ್ನು ಹುಡುಕಿಕೊಳ್ಳಲು ಸಹಾಯಕವಾಗಬಹುದು. ನಾನೇಕೆ ಈಗಿನಿಂದಲೇ ಯೋಚಿಸಬೇಕು" ಎಂದು ಅನೇಕ ಸಲ ಶ್ರೀಧರನು ನೆನೆದು ಸಮಾಧಾನಹೊಂದುತ್ತಿದ್ದನು.

ಈ ಬಗೆಯ ಯೋಚನೆಗಳನ್ನು ಹೊರಗೆ ಮಗಳ ಮುಂದೆ ಹೇಳುತ್ತಿರಲಿಲ್ಲ. ಸುಶಿಕ್ಷಿತರ ಮನೆಯಂತೆ ಕುಸುಮಳಿಗೆ ಮನೆಯಲ್ಲಿ ಹಿರಿಯ ಸ್ಥಾನ ದೊರೆತಿತ್ತು. ಶ್ರೀಧರರಾಯನು ಇವಳನ್ನು ಗೌರವದಿಂದ ಕಾಣುತ್ತಿದ್ದನು. ಅವಳನ್ನು ಕೇಳದೇ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ.

ಮದುವೆಯ ವಿಷಯವನ್ನೆತ್ತಿದಾಗ ಕುಸುಮಳು "ನನಗೇಕೆ ಮದುವೆ ತಂದೆಯವರೇ" ಎಂದು ಕೇಳುತ್ತಿದ್ದಳು.

"ಹಾಗೆಂದರೇನಮ್ಮಾ?"

"ನನಗನುಗುಣನಾದವನು ದೊರೆಯುವುದು ಕಷ್ಟವಾಗಬಹುದು. ಇದರಿಂದ ನಿಮಗೂ ತೊಂದರೆಯಾಗಬಹುದು. ಆದುದರಿಂದ ಈ ಜನ್ಮದಲ್ಲಿ ನಾನು ಮದುವೆಯಾಗದೆ ಇರುವುದೇ ಉತ್ತಮವೆಂದು ನಿಶ್ಚಯಿಸಿದ್ದೇನೆ. ಅನ್ಯಜಾತಿ ಕುಲದವರಾದರೂ, ನೀವು, ಅಮ್ಮ, ಅನ್ಯೋನ್ಯವಾಗಿ ಕಾಲ ಕಳೆದಿರಿ. ನಿಮ್ಮ ಜೋಡು ಬಹು ಆದರ್ಶಮಯವಾಗಿದ್ದಿತು. ನನಗೆ ಅಂಥವನು ದೊರೆಯುವುದು ಕಷ್ಟ. ಪೀಕಲಾಟದ ತೊಂದರೆಯ ಮದುವೆ ಬೇಡಪ್ಪಾ ನನಗೆ'.

"ಪೀಕಲಾಟದ ಮದುವೆ ಎಂದರೇನಮ್ಮಾ? ಸರಿಯಾದ ವರನನ್ನು ಆರಿಸುವ, ನಿನ್ನ ಮನಸ್ಸಿಗೆ ಬಂದವನನ್ನೇ ಮದುವೆಯಾಗು"

"ಮೊದಲೇ ಹೇಗಪ್ಪಾ ಅದನ್ನು ನಿರ್ಧರಿಸುವುದು? ಹಿರಿಯರು ಆರಿಸಿದ ವರನನ್ನು ಮದುವೆಯಾದ ನಂತರ, ಸತಿಪತಿಯರಲ್ಲಿ ಅನ್ಯೋನ್ಯವಾದ ಪ್ರೀತಿ ನೆಲೆಗೊಂಡು, ಜೋಡು ಸರಿಹೋದರೆ ತಂದೆತಾಯಿಗಳಿಗೆ ಸಂತೋಷ. ಇಲ್ಲವಾದರೆ ಹೆಣ್ಣನ್ನು ಹಡೆದವರ ದುಃಖ ಹೇಳಲಾಗದು. ಹಡೆದ ಹೆಣ್ಣು ಸುಖವಿಲ್ಲದ ಮನೆ ಸೇರಿದರೆ ನಿಮಗೆ ನೋವಾಗುವದಿಲ್ಲವೆ? ನಿಮಗೆ ತೊಂದರೆಯಾಗುವುದು ಬೇಡ. ಈಗಿನ ದುಃಖವೇ ಸಾಕು."

ಕುಸುಮಳು ಇನ್ನೂ ಅನುಭವವಿಲ್ಲದ ಹೆಣ್ಣು. ಆದುದರಿಂದ ಈ ಮಾತುಗಳಿಂದ ಆತನಿಗೇನೂ ಅಸಮಾಧಾನವಾಗಲಿಲ್ಲ. ತನ್ನ ಮಾತನ್ನು ಮುಂದುವರಿಸುತ್ತ "ಎಂತಹ ಹುಚ್ಚಿ ನೀನು? ನಮ್ಮ ಸಂಸಾರದಲ್ಲಿ ಕಂಡ ಸುಖಸಂಪತ್ತಿನ ಅರಿವು ನಿನಗೆ ಹೇಗೆ ತಿಳಿಯಬೇಕು ತಾಯಿ? ನಮ್ಮ ಮೃದು ಜೀವನದಲ್ಲಿ ಯಾವ ಹೊಂದುಗೂಡುವಿಕೆಯನ್ನು ಕಂಡು ಹಿಡಿದೆ ಮಗುವೆ? ನಮ್ಮ ಜೀವನ ಎಲ್ಲರಂತೆ........" ಎಂದು ರಾಯನು ಮೆಲ್ಲಗೆ ನುಡಿದ.

"ಮಾಡಿಕೊಂಡ ಹೆಂಡತಿಯಾಗದಿದ್ದರೂ ನನ್ನ ತಾಯಿಯಲ್ಲಿ ನೀವು

ತೋರಿದಷ್ಟು ತ್ಯಾಗ ಇತರರು ತೋರಿಸುವರೇನು? ನಿಮ್ಮ ಜೀವನ ತ್ಯಾಗ ಮಯವಾದುದು."

"ಏನು ತ್ಯಾಗವೇ ತಾಯಿ? ಏನದು ಹುಚ್ಚು ಮಾತು ಮಗೂ." ಎಂದು ಕೇಳಿದ ಹುಸಿ ನಗುವಿನಿಂದ.

"ಇನ್ನೇನು ಬೇಕು? ತಾಯಿಯವರಿಗಾಗಿ ನಿಮ್ಮ ಕುಲಕ್ಕೆ ಶರಣು ಹೊಡೆದಿರಿ; ಮನೆಯವರಿಂದ ದೂರಾದಿರಿ. ಇಷ್ಟು ಸಾಲದೆ?"

"ಇಷ್ಟು ಮಾತ್ರ ತ್ಯಾಗ ನಿಮ್ಮ ತಾಯಿ ಮಾಡಲಿಲ್ಲವೆ? ನಿಮ್ಮ ಅವ್ವ, ಇನ್ನಿತರರು, ಜೀವನ ನಡೆಸುವುದು ಕಷ್ಟವೆಂದು ತಿಳಿದಿದ್ದರೂ, ನನ್ನೊಂದಿಗೆ ಯಾವುದನ್ನೂ ಲೆಕ್ಕಿಸದೇ ಇದ್ದು ಬಿಡಲಿಲ್ಲವೇ ನಿನ್ನ ತಾಯಿ? ಮನೆಯವರು ಎಷ್ಟು ಜೇಡಿಕೊಂಡರು? ಎಷ್ಟು ಬೆದರಿಕೆ ಹಾಕಿದರು? ಆಶೆಗಳ ಹೊರೆಯನ್ನು ಮುಂದಿಟ್ಟರು. ಏನೇನೋ ವಿಶ್ವಪ್ರಯತ್ನ ಮಾಡಿದರು ನಮ್ಮಿಬ್ಬರನ್ನು ಅಗಲಿಸಬೇಕೆಂದು. ಆದರೂ ನಿನ್ನ ತಾಯಿ ಮನಸ್ಸು ಬದಲಿಸಲಿಲ್ಲ. ಅದು ತ್ಯಾಗವಲ್ಲವೆ?"

"ಅವಳು ನಿಮ್ಮ ಹಾಗೆ ಕುಲವನ್ನೇ ತ್ಯಾಗ ಮಾಡಲಿಲ್ಲವಲ್ಲ?"

"ಹುಚ್ಚು ಹುಡುಗೀ. ನನಗೆ ನನ್ನ ಕುಲವೆಷ್ಟು ಹಿರಿದೋ, ನಿನ್ನ ತಾಯಿಗೂ ಅವಳ ಕುಲವಷ್ಟು ದೊಡ್ಡದಲ್ಲವೆ? ಹಣವಿಲ್ಲದಿದ್ದರೂ ಮನುಷ್ಯನು ಜೀವಿಸಬಹುದು. ಆದರೆ ಕುಲವಿಲ್ಲದವನಿಗೆ ಜಗತ್ತಿನಲ್ಲಿ ಸ್ಥಾನವಿಲ್ಲ: ಅವನು ಜೀವಿಸಲಾರ. ನನ್ನ ತ್ಯಾಗಕ್ಕಿಂತಲೂ ನಿನ್ನ ತಾಯಿಯ ತ್ಯಾಗವೇ ಹಿರಿದಾದುದು."

"ಅಂದಲ್ಲಿ ನೀವಿಬ್ಬರೂ ಆದರ್ಶ ದಂಪತಿಗಳಲ್ಲವೆಂದು ಏತಕ್ಕೆ ಹೇಳುವಿರಿ?"

"ನಿನ್ನ ವಿಷಯದಲ್ಲಿಯೂ ಹೀಗೇ ನೋಡು. ನಿನ್ನನ್ನು ಮದುವೆ ಯಾಗಲು ಬರುವ ಯುವಕನು ತಾನು ತ್ಯಾಗ ಮಾಡುವ ಉದ್ದೇಶ ದಿಂದಲೇ ಮುಂದೆ ಬರುವನಲ್ಲವೆ?"

"ನಿಮ್ಮದೆಷ್ಟು ಹುಚ್ಚು ತಿಳಿವಳಿಕೆ! ಈಗಿನ ಕಾಲದ ಹುಡುಗರು ಮದುವೆಯಲ್ಲಿ ತ್ಯಾಗವೆಂಬುದನ್ನು ಕಂಡು ಹಿಡಿದು ಮದುವೆಯಾಗುವ ರೆಂದು ತಿಳಿದಿರುವಿರೇನು? ನನ್ನಲ್ಲಿರುವ ಹಣದ ಗಂಟನ್ನು ಕಂಡು ಸಿರಿ

ವಂತಿಕೆಯನ್ನನುಭವಿಸಲು ಬರುವದೇ ಹೊರತು ಬೇರೆ ಅಲ್ಲ. ಅವರ ಪ್ರೇಮ ತ್ಯಾಗಮಯವಾದುದೆಂದು ನಮಗೆ ಹೇಗೆ ತಿಳಿಯಬೇಕು?"

"ಹೀಗೆಂದು ಮದುವೆಯಾಗದೇ ಇರಬೇಕೇನು?"

"ಅಹುದು. ಒಂದು ಆದರ್ಶವನ್ನು ಆರಾಧಿಸಬೇಕಾದರೆ ಸ್ವಲ್ಪಾದರೂ ತ್ಯಾಗಮಾಡಿಯೇ ತೀರಬೇಕು. ನನ್ನ ನಿಶ್ಚಯವಿದು. ಬದುಕಿರುವವರೆಗೂ ನಾನು ಮದುವೆಯಾಗುವುದೇ ಇಲ್ಲ."

"ಇದು ಸುಲಭವೆಂದು ನೀನು ತಿಳಿದಿರುವಿ. ನೀನು ನೆನೆದಷ್ಟು ಸರಳವಾದ ಕಾರ್ಯವಲ್ಲವದು. ಒಬ್ಬಳೇ ಜೀವಿಸುವುದು ಬಹಳ ಕಷ್ಟದ ಕೆಲಸ."

"ಹಾಗೆ ಅದು ಅಸಂಭವವೆಂದೆನಿಸಿದಾಗ, ನನ್ನ ನಿರ್ಣಯವನ್ನು ಬದಲಾಯಿಸುವೆ. ಈಗ ಮದುವೆಯಾಗುವುದು ನನಗೆ ಸರಿಯಲ್ಲವೆಂದೆನಿಸಿದುದರಿಂದ ಸದ್ಯಕ್ಕೆ ಮದುವೆಯಾಗುವದಿಲ್ಲ. ಕೈಲಾಗದ ಕೆಲಸವನ್ನೆಂದಿಗೂ ಮಾಡಲು ನಾನು ಸಾಹಸ ಮಾಡುವುದಿಲ್ಲ....ಆಗಲಾದರೂ ಏನನ್ನು ಮಾಡುವೆನೆಂದು ತಿಳಿದಿರುವಿರಿ? ನನ್ನನ್ನು ನಿರಾಶಾ ಸಮುದ್ರದಲ್ಲಿ ಮುಳುಗಿಸುವ ಮದುವೆಯ ಗೊಡವೆಗೆ ಮಾತ್ರ ಹೋಗುವುದಿಲ್ಲ. ಯಾವನೋ ನಾಲ್ವತ್ತರ ವಯಸ್ಸಾದವನನ್ನು ದೊಡ್ಡ ಉಪಕಾರ ಮಾಡಿದ ಹೆಮ್ಮೆಯೆಂದು ತಿಳಿದು, ಅವನನ್ನು ನನ್ನ ಆಳಾಗಿ ನಡೆಯಿಸಿಕೊಳ್ಳುವ ಉದ್ದೇಶದಿಂದ ಮದುವೆಯಾಗುವೆನು. ಎಲ್ಲಿ ಮೋಸ ಹೋಗಬಹುದೆಂಬ ಅಂಜಿಕೆ ಬರುವುದೋ ಅಂಥಾ ಗೋಜಿಗೇ ಹೋಗುವುದಿಲ್ಲ ತಂದೆ. ಮದುವೆ ಯಾಗದಿದ್ದರೇನಾಯಿತು? ನಾವು ಹೆಣ್ಣು ಜೀವಿಗಳು ಜೀವಿಸಲಾರೆವೊ? ಮುದುಕನನ್ನೆ ಮದುವೆಯಾಗುತ್ತೇನೆ ಕೊನೆಗೆ" ಎಂದು ನಗು ನಗುತ್ತ ಕುಸುಮಳು ಹೇಳಿದಳು.

"ಎಂಥಾ ಹುಚ್ಚು ಹುಡುಗೀ ನೀನು! ಏನೋಮ್ಮ ನಿನ್ನ ಮಾತುಗಳು" ಎಂದು ಹೇಳಿ ರಾಯನು ಸುಮ್ಮನಾದನು.

೨

ತಂದೆಯ ಎದೆ ಬೇನೆಯ ಬಗ್ಗೆ ಕುಸುಮಳಿಗೆ ಹೆಚ್ಚು ಪರಿಚಯವೇ ಇರಲಿಲ್ಲ. ಆ ಬೇನೆಯ ಲಕ್ಷಣಗಳೂ ಅವಳಿಗೆ ಗೊತ್ತಿರಲಿಲ್ಲ. ಅಂತಹ ಬೇನೆಯಿಂದ ತನ್ನ ತಂದೆಯ ಜೀವಕ್ಕೆ ಎಂತಹ ಹಾನಿ ಇದೆ ಎಂಬು ವುದೂ ತಿಳಿದಿರಲಿಲ್ಲ. ರಾಯರು ತಮ್ಮ ಬೇನೆಯ ವಿಷಯ ಕುಸುಮಳ ಮುಂದೆ ಏನೂ ಹೇಳಿರಲಿಲ್ಲ. ಏನೋ ಸಾಧಾರಣವಾದ ಬೇನೆಯೆಂದು ಹೇಳಿ ಡಾಕ್ಟರನ ಹತ್ತಿರ ಹೋಗಿ ಬರುತ್ತಿದ್ದನು. ಬೇನೆಯ ನಿಜ ಹೆಸರು ಹೇಳಿದರೆ ಕುಸುಮಳೆಲ್ಲಿ ಎದೆಗುಂದುವಳೋ ಎಂಬ ಹೆದರಿಕೆ ರಾಯನನ್ನು ಸುಮ್ಮನಿರಿಸಿತು. ಆದುದರಿಂದ ತನ್ನ ತಂದೆಗೆ ಗುಣವಾಗ ದಂಥ ರೋಗ ಬಂದಿದೆಯೆಂಬ ಅರಿವು ಕುಸುಮಳಿಗೆ ಆಗಿರಲೇ ಇಲ್ಲ. ಒಂದು ದಿನ ಆಕಾರಣವಾಗಿ ಕುಸುಮಳು ತಂದೆಯುನ್ನುದ್ದೇಶಿಸಿ "ಅಪ್ಪಾ, ನೀವು ಈ ರೀತಿ ತಾತ್ಸಾರ ಮಾಡುವುದು ಒಳಿತಲ್ಲ. ಉತ್ತಮ ಡಾಕ್ಟರ ರಿಗೆ ನಿಮ್ಮ ಮೈ ತೋರಿಸಿ ಔಷಧ ಪಡೆಯುವುದು ಒಳ್ಳೆಯದು. ಮೊದಲಿ ನಿಂದಲೇ ಆರೈಕೆ ಮಾಡುವುದರಿಂದ ಬೇನೆ ಬೇಗ ಗುಣವಾಗಬಹುದಲ್ಲವೆ? ಕೈಮೀರಿದ ಮೇಲೆ ಯೋಚಿಸಿ ಪ್ರಯೋಜನವೇನು?" ಎಂದಳು.

ಕುಸುಮಳನ್ನು ಸಮಾಧಾನ ಮಾಡುವ ಉದ್ದೇಶದಿಂದ ಡಾಕ್ಟರರ ಹತ್ತಿರ ಹೋಗಿ ಬಂದನು. ಇತ್ತೀಚೆಗೆ ರಾಯರಿಗೆ ಎದೆ ನೋವು ದಿನವೂ ಬರುತ್ತಲಿತ್ತು. ತಂದೆಯ ಬೇನೆಯ ಲಕ್ಷಣ ತಿಳಿಯದ ಕುಸು ಮಳು ಅಂತಹದೇನೂ ವಿಪರೀತವಾದ ವಿಷಯವಲ್ಲವೆಂದು ಸುಮ್ಮನಿ ದ್ದಳು; ಕುಸುಮಳನ್ನು ಅಧೈರ್ಯಗೊಳಿಸಬಾರದೆಂಬ ಯೋಚನೆ ಯಿಂದಲೇ ರಾಯನು ತನ್ನ ಬೇನೆಯ ವಿಷಯ ಇಷ್ಟು ಗೋಪ್ಯವಾಗಿ ಡಲು ಸಾಹಸ ಮಾಡಿದನು.

ಅಂದೇಕೋ ಮನಸ್ಸಿಗೆ ಸುಖವೆನಿಸಲಿಲ್ಲ. ರಾತ್ರಿ ಎದೆ ನೋವು ಎರಡು ಸಲ ಬಂದು ನಿದ್ರಾಭಂಗವಾಗಿತ್ತು. ಹೀಗೆ ವ್ಯಥೆಪಟ್ಟರೆ ಕುಸು ಮಳಿಗೆ ತಿಳಿದೇ ತೀರುವುದು. ತಡಮಾಡಿ ತಾತ್ಸಾರದಿಂದ ಬೇನೆಯನ್ನು ಹೆಚ್ಚಿಸಿ ಕೊಂಡರೆ, ಮುಂದೆ ಬಹಳ ಕಷ್ಟವಾಗಬಹುದು. ಈ ಯೋಚನೆ

ಯಿಂದ ಊರಲ್ಲಿ ಹೆಸರಾದ ಡಾಕ್ಟರನ ಹತ್ತಿರ ಪರೀಕ್ಷೆಮಾಡಿಸಿದು ದಾಯಿತು. ಎಲ್ಲವನ್ನೂ ವಿವರವಾಗಿ ಪರೀಕ್ಷಿಸಿ ಡಾಕ್ಟರನು "ಬೇನೆ ಬಹಳ ಮುಂದುವರಿದಿದೆ. ಇನ್ನೆರಡು ವಾರಗಳು ತಡಮಾಡಿದ್ದರೆ ಗುಣ ವಾಗುವುದೇ ಕಠಿಣವಾಗುತ್ತಿತ್ತು. ದೇವರ ದಯೆಯಿಂದ ನೀವು ಆದಷ್ಟು ಬೇಗ ಬಂದಿರುವಿರಿ. ಗುಣ ಮಾಡಬಹುದೆಂಬ ಆಶೆ ಇದೆ. ಪ್ರಯತ್ನಿಸು ತ್ತೇನೆ. ಇರಲಿ, ನಿಮಗೆಷ್ಟು ದಿನವಾಯಿತು ಈ ಬೇನೆಬಂದು?" ಎಂದು ಕೇಳಿದ.

"ನನ್ನ ಸಣ್ಣವಯಸ್ಸಿನಿಂದಲೂ ಈ ಬೇನೆ ಬೇರೂರಿದೆ. ನಮ್ಮ ತಾಯಿಗೂ ಇತ್ತು. ಇದೇ ಕಾರಣದಿಂದಲೇ ಅವರು ತೀರಿಕೊಂಡರು. ನಾನು ಸಣ್ಣವನಿರುವಾಗ ರಕ್ತಹೀನ ರೋಗದಿಂದ ಬಳಲಿದೆ. ಅದು ಗುಣವಾದ ನಂತರ ಇದು ತಲೆದೋರಿತು. ಸಾಕಷ್ಟು ಉಪಚಾರವೂ ನಡೆದಿದೆ. ಆದರೆ ಒಳ್ಳೇ ಪಥ್ಯಪಾನ ಮಾಡಿ, ಬೇನೆಯನ್ನು ಗುಣಪಡಿಸಿ ಕೊಳ್ಳುವ ಗೋಜಿಗೆ ಹೋಗಲಿಲ್ಲ".

"ಏತಕ್ಕೆ? ಹಣದ ಕೊರತೆಯೆ?"

"ಅಲ್ಲ. ಜೀವನದಲ್ಲಿ ನನಗೊಂದು ಬಗೆಯ ವಿರಸವಿತ್ತು. ಆದುದ ರಿಂದ ತಾತ್ಸಾರ ಮಾಡಿದೆ."

"ನೀವು ಬಹಳ ತಪ್ಪು ಕೆಲಸ ಮಾಡಿದಿರಿ. ದುರ್ಲಕ್ಷ್ಯದಿಂದ ಈ ರೀತಿ ಶರೀರಕ್ಕೆ ತಾಪವನ್ನುಂಟುಮಾಡಿಕೊಳ್ಳಬಾರದು. ಆದರೂ ಕೈಮೀರಿ ಹೋಗಿಲ್ಲ. ಪ್ರಯತ್ನಿಸಿದರೆ, ಗುಣವಾಗಬಹುದೆಂಬ ಆಶೆಯಿದೆ. ನಿಮಗೆ ಪೂರ್ಣ ವಿಶ್ರಾಂತಿ ಬೇಕು. ಮಾನಸಿಕ ಶಾಂತಿ ಬೇಕು ಗಲಭೆ ಗೊಂದಲಗಳಿಂದ ದೂರಿರಬೇಕು. ಹೀಗೆ ಮಾಡಲು ನಿಮಗಿಷ್ಟವೇ" ಎಂದು ಡಾಕ್ಟರನು ಸೂಚಿಸಿದ.

"ಖಂಡಿತ ಮಾಡುತ್ತೇನೆ. ರೋಗಿಯ ಸಹಕಾರವಿದ್ದರೇನೇ ಡಾಕ್ಟರನು ಬೇನೆಯನ್ನು ಕಳೆಯಬಲ್ಲ. ನನ್ನ ಒಳ್ಳೆಯದಕ್ಕೇಂದೇ ನೀವು ಹೇಳುವಿರಿ. ದಯವಿಟ್ಟು ತಮ್ಮ ಉಪಚಾರ ಮೊದಲಾಗಲಿ. ತಡಮಾ ಡುವುದು ಬೇಡ. ತಮ್ಮ ನಿಯಮಗಳಂತೆ ನಡೆದುಕೊಳ್ಳುತ್ತೇನೆ." ಎಂದು ರಾಯನು ಹೇಳಿದ.

ಡಾಕ್ಟರನು ಇಂಜೆಕ್ಷನು ಮಾಡಿ, ಔಷಧವನ್ನು ಕೊಟ್ಟು ಇನ್ನಿತರ ಸಲಹೆಗಳನ್ನಿತ್ತು ಧೈರ್ಯಹೇಳಿ ಕಳುಹಿದನು. ಮನೆಗೆ ಬರುವಾಗ ರಾಯರು ಬಹಳ ಯೋಚನೆಗೊಳಗಾದರು. ತನ್ನ ಬೇನೆ ಅಂತಹ ಕೆಟ್ಟ ಸ್ಥಿತಿಗೆ ಬಂದೀತೆಂದು ಭಾವಿಸಿರಲಿಲ್ಲ. ಇಷ್ಟು ದಿನ ತಡಮಾಡಿ, ತಾತ್ಸಾರ ಮಾಡಿದುದಕ್ಕೆ ತನ್ನನ್ನೇ ಬೈದುಕೊಂಡನು. ತನ್ನ ದೈವವನ್ನು ದೂರಿಕೊಂಡನು. ತಾನು ಕುಸುಮಳಿಂದ ದೂರಾಗಬೇಕಾದುದಕ್ಕೆ ಯೋಚಿಸಲಿಲ್ಲ. ತನ್ನ ಸಾವಿನಿಂದ ಕುಸುಮಳಿಗೆ ಬರುವ ಕಷ್ಟ ಪರಂಪರೆಗಳ ಯೋಚನೆಯೇ ಇವನನ್ನು ಅಧೈರ್ಯಗೊಳಿಸಿತು. ಬೇನೆ ಬೇಗ ನಯವಾಗಲಾರದು, ಔಷಧ ಉಪಚಾರಾದಿಗಳು ಹೆಚ್ಚು ಜಾಗ್ರತೆಯಿಂದ ನಡೆಯಬೇಕು, ಎಂದು ಹೇಳಿದ ಡಾಕ್ಟರನ ಉಪದೇಶದ ಮಾತುಗಳು ರಾಯನನ್ನು ಬಹಳ ನೋಯಿಸಿದ್ದವು. ಕುಸುಮಳು ಅನಾಥೆಯಾಗಿ, ಜಗತ್ತಿನಲ್ಲಿ ಅಲೆಯದಂತೆ ಮಾಡಬೇಕೆಂದು ನಿಶ್ಚಯಿಸಿದ. ಅವನ ಊಹೆಗಳೆಲ್ಲವೂ ಪೂರೈಸುವಂತೆ ತೋರಲಿಲ್ಲ. ಚಿಂತೆಯಿಂದ ಮನೆ ಸೇರಿದ.

"ನಿಮಗಾಗದವರನ್ನು ಹತ್ತಿರ ಕರೆಯಬೇಡಿರಿ. ಗಾಬರಿಯಾಗಬೇಡಿರಿ. ಸ್ವಲ್ಪ ಕಡಮೆ ಊಟಮಾಡುವುದು ಒಳಿತು. ನಿಮ್ಮ ಮನಸ್ಸು ಉದ್ರೇಕಗೊಳಿಸುವ ಗೋಜಿಗೆ ಹೋಗಬೇಡಿರಿ. ದೈವ ಸಹಾಯ ದೊರೆತಲ್ಲಿ ನಿಮ್ಮ ರೋಗ ಗುಣವಾಗಬಹುದು" ಎಂದು ಹೇಳಿದ ಡಾಕ್ಟರನ ಮಾತುಗಳು ರಾಯನ ಕಿವಿಯಲ್ಲಿಯೇ ಪ್ರತಿಧ್ವನಿಗೊಡುತ್ತಿದ್ದವು. ಕುದುರೆಗಾಡಿಯಲ್ಲಿ ಮನೆಗೆ ಬರುವಾಗ ರಾಯನಿಗೆ ವೈಮೇಲೆ ಪ್ರಜ್ಞೆಯೇ ಇರಲಿಲ್ಲ. ಸುಮ್ಮನೇ ಮೂಕನಂತೆ ಮನೆಗೆ ಬಂದು ಸೇರಿದ. ದೇವರು ದೊಡ್ಡವನು. ತನಗೆ ಅಂತ್ಯ ಕಾಲದಲ್ಲಿ ಸಹಾಯಕನಾಗುವನೆಂದು ನಂಬಿದ್ದನು.

## ೩

ಶ್ರೀಧರ ರಾಯನ ಮನೆ ವಿಶಾಲವಾಗಿದ್ದಿತು. ತಂದೆಯವರಿಂದ ದೂರಿದ್ದರೂ ಸ್ವಂತ ಪರಿಶ್ರಮದಿಂದ ಸಾಕಷ್ಟು ಸಂಪಾದನೆ ಮಾಡಿದ್ದನು. ಹತ್ತಿ ವ್ಯಾಪಾರದಲ್ಲಿ ಹೆಚ್ಚು ಲಾಭ ಬಂದಿದ್ದುದರಿಂದ ಅದನ್ನು ಮತ್ತೆ ಸಟ್ಟಾ ವ್ಯಾಪಾರದಲ್ಲಿ ಉಪಯೋಗಿಸದೆ ದಕ್ಷತೆಯಿಂದ ಕಾದುಕೊಂಡು ಬಂದಿದ್ದನು.

ಅಂದು ಮುಂಜಾನೆ ಹತ್ತು ಘಂಟೆಯ ಸಮಯ. ಇಪ್ಪತ್ತು ವರುಷದ ಯುವಕನೊಬ್ಬನು ತನ್ನ ಮಿತ್ರನೊಂದಿಗೆ ರಾಯನ ಮನೆಗೆ ಬಂದು 'ಕಸುಮಾದೇವಿಯವರು ಮನೆಯಲ್ಲಿದ್ದಾರೆಯೆ?' ಎಂದು ಕೇಳಿದ.

ಮಾಳಿಗೆಯ ಮೇಲೆ ಅಂದಿನ ಪತ್ರಿಕೆಯನ್ನು ಓದುತ್ತಲಿದ್ದ ಕುಸುಮಳು ಕೆಳಗಿಳಿದು ಬಂದು, ಅತಿಥಿಯನ್ನುದ್ದೇಶಿಸಿ "ಒಳಗೆ ಬನ್ನಿ. ಇಲ್ಲಿ ಕುಳಿತುಕೊಳ್ಳಬಹುದು" ಎಂದು ಆಸನವನ್ನು ತೋರಿಸಿದಳು. ಇವಳು ಇಂಗ್ಲೀಷಿನಲ್ಲಿ ತಮ್ಮನ್ನು ಬರಮಾಡಿಕೊಂಡುದು ಆ ಹೊಸಬರಿಗೆ ಆಶ್ಚರ್ಯವೆನಿಸಿತು. ಅದರಂತೆಯೇ ಕುಸುಮಳಿಗೂ ಆಶ್ಚರ್ಯ! ಅಪರಿಚಿತರು ತನ್ನನ್ನು ನೋಡಲು ಬಂದುದು ಇದೇ ಮೊದಲನೆಯ ಸಲವಾದುದರಿಂದ ಮೊದಲಿಗೆ ಸ್ವಲ್ಪ ಭಯವೆನಿಸಿತು.

ಮುಗುಳು ನಗೆಯಿಂದ ಇಬ್ಬರೂ ಎರಡಾಸನದ ಮೇಲೆ ಕುಳಿತರು. ತನ್ನ ಮನೆಯೇ ಆದುದರಿಂದ ಸಾಕಷ್ಟು ಓದಿಕೊಂಡಿದ್ದ ಕುಸುಮಳಿಗೆ ಅಪರಿಚಿತರೊಂದಿಗೆ ಮಾತನಾಡುವುದು ಕಠಿಣವೆನಿಸಲಿಲ್ಲ.

"ನಮ್ಮ ಶಾಲೆಯ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯದರ್ಶಿ ನಾನು. ನನ್ನ ಹೆಸರು ಕಾಂತರಾಯ. ಈತ ನನ್ನ ಮಿತ್ರನೊಬ್ಬ. ನೀವು ಐದು ವರುಷದ ಹಿಂದೆ ನಮ್ಮ ಶಾಲೆಯಲ್ಲಿ ಓದುತ್ತಲಿದ್ದುದು ನನಗೆ ತಿಳಿದಿದೆ. ಯಾವ ಕಾರಣದಿಂದ ತಮ್ಮಂಥ ಕುಲೀನರು ಓದು ಮುಂದುವರಿಸಲಿಲ್ಲವೋ ತಿಳಿಯದು. ಹಳೆಯ ವಿದ್ಯಾರ್ಥಿಸಂಘದ ಸದಸ್ಯರ ಪಟ್ಟಿಯಲ್ಲಿ ತಮ್ಮ ಹೆಸರಿದೆ. ಹೋದ ವರುಷ ತಮ್ಮ ಸಹಾನುಭೂತಿಯೂ ದೊರೆತಿದೆ. ಸಂಘಕ್ಕೆ ಸಲ್ಲಿಸಬೇಕಾದ ಹಣ ಸಲ್ಲಿಸಿ ನೀವು

ಆಜೀವ ಸದ್ಯಸರಾಗಿರುವುದು ಸಂತೋಷದ ವಿಷಯ. ಈ ಸಲ ಹಳೆಯ ವಿದ್ಯಾರ್ಥಿಗಳ ಸಂಘದ ವಾರ್ಷಿಕೋತ್ಸವ ನೆರವೇರಿಸುವ ಭಾರ ನನ್ನ ಮೇಲೆ ಬಿದ್ದಿದೆ. ತಮ್ಮಂಥ ಸುಶಿಕ್ಷಿತರ ನೆರವು ಅಗತ್ಯ ಬೇಕಾಗಿದೆ. ನೀವು ವಾರ್ಷಿಕೋತ್ಸವದ ಆಟಪಾಟಗಳಲ್ಲಿ ಹೆಚ್ಚಿನ ಭಾಗ ವಹಿಸುವುದಲ್ಲದೆ, ವಿವಿಧ ವಿನೋದಾವಳಿ ಕಾರ್ಯಕ್ರಮದಲ್ಲಿ ಸಾಮಾಜಿಕ ನಾಟಕದಲ್ಲಿ ತಪ್ಪದೇ ಭಾಗವಹಿಸಿ ತಮ್ಮ ಹೆಚ್ಚಿನ ಸಹಕಾರವನ್ನು ತೋರುವಿರೆಂದು ಕೋರುತ್ತೇನೆ" ಎಂದು ಒಂದೇ ಉಸುರಿನಲ್ಲಿ ಒಪ್ಪಿಸಿದ.

ಈ ವರದಿಯನ್ನು ಕೇಳಿ ಕುಸುಮಳಿಗೆ ಆಶ್ಚರ್ಯವೆನಿಸಿತು. ಸುಶಿಕ್ಷಿತ ಹುಡುಗನಾದ ಈತ ಇಷ್ಟು ನಯವಾಗಿಯೂ ಮಾತನಾಡುವುದನ್ನು ಕೇಳಿ ಸಂತೋಷವಾಯಿತು. ತಂದೆಯವರ ಬೇನೆಯ ಆರೈಕೆಯಿಂದ ನೊಂದ ಈ ಹೃದಯಕ್ಕೆ ಈ ಯುವಕನೊಂದಿಗೆ ಮೋಜಿನ ಹರಟೆ ಹೊಡೆಯುವುದು ಮನಸ್ಸಿಗೆ ಬೇಕೆನಿಸಿತು. ಮನಸ್ಸು ಹರುಷಗೊಂಡಿತು.

ಆ ವರುಷದ ಚಂದಾಹಣವನ್ನೂ, ವಾರ್ಷಿಕೋತ್ಸವಕ್ಕೆ ತನ್ನ ಮನೆಯ ವಂತಿಗೆಯನ್ನೂ ಅವರಿಗೆ ಸಲ್ಲಿಸಿ ನಮಸ್ಕರಿಸುತ್ತ "ಸಮಾರಂಭಕ್ಕೆ ತಪ್ಪದೇ ಬರುತ್ತೇನೆ. ತಾವು ಸ್ವಲ್ಪ ಮುಂದಾಗಿ ತಿಳಿಸಬೇಕು. ಮರೆಯಬಾರದು ಮತ್ತೆ" ಎಂದಳು.

"ಈ ಸಹಾನುಭೂತಿಗೆ ನಮ್ಮ ಸಂಘದ ಪತಿಯಿಂದ ಆಭಾರ ಮನ್ನಿಸುತ್ತೇನೆ. ಆದರೆ ತಮ್ಮಿಂದ ಇದಕ್ಕಿಂತಲೂ ಹೆಚ್ಚಿನ ಸಹಾಯ ಬೇಡಲು ಮತ್ತೊಮ್ಮೆ ಬರುತ್ತೇನೆ. ನಮ್ಮ ನಾಟಕದಲ್ಲಿ ತಾವು ಭಾಗ ವಹಿಸಬೇಕೆಂದು ನನ್ನ ಆಗ್ರಹವಿದೆ. ನನ್ನ ಈ ವಿನಂತಿಯನ್ನು ತಾವು ನನೆಯಿಸಿ ಕೊಡಲೇ ಬೇಕು. ಇಲ್ಲೆನ್ನಬಾರದು. ತಮ್ಮಂಥವರು ನಾಟಕದಲ್ಲಿ ಪಾರ್ಟು ಮಾಡಿದರೆ ಉತ್ಸವಕ್ಕೆ ಹೆಚ್ಚಿನ ಕಳೆ ಕಟ್ಟುತ್ತದೆ. ಕನ್ನಡದ 'ಕನ್ಯಾಶುಲ್ಕ' ನಾಟಕದಲ್ಲಿ ತಾವು ಮಧುರವಾಣಿಯ ಪಾತ್ರ ವಹಿಸಬೇಕೆಂದು ನನ್ನ ವಿನಂತಿ. ನಿರಾಕರಿಸಬಾರದು" ಎಂದು ಕಾಂತರಾಯನು ಹೇಳಿದ ಮಾತುಗಳು ಕುಸುಮಳನ್ನು ಯೋಚನೆಯಲ್ಲಿ ಕೆಡವಿದವು. ಮಧುರವಾಣಿಯ ಪಾತ್ರವನ್ನೇತಕ್ಕೆ ತನಗಾಗಿ ಆರಿಸಿದರು? ತಾನು ವೇಶ್ಯೆಯ ಮಗಳೆಂದು ಹಿಯ್ಯಾಳಿಸಲು ಇವರು ಈ ರೀತಿ ಮಾಡಿರ

ಬಹುದೇ? ಇದಾವುದೂ ತಿಳಿಯದೆ ಸುಮ್ಮನೇ ಸೂಚಿಸಿರಬಹುದೇ? ಇವನಿಗೇನು ಗೊತ್ತು ತನ್ನ ತಾಯಿಯ ಇತಿಹಾಸ?" ಸ್ವಲ್ಪ ಕಾಲ ಸುಮ್ಮನೇ ಕುಳಿತರು. ಕಾಂತರಾಯನು ಕುಸುಮಳ ನಿರ್ಣಯವೇನೆಂಬುದನ್ನು ತಿಳಿಯಲು ಆಶೆಯಿಂದ ಅವಳನ್ನು ದುರದುರನೆ ನೋಡುತ್ತಿದ್ದ.

"ಹಾಗಲ್ಲ. ತಾವು ಖಂಡಿತ ಉತ್ಸವವನ್ನು ನೋಡಲು ಬಂದೇ ತೀರಬೇಕು..... ...ಅನುಕೂಲವಿಲ್ಲದಿದ್ದರೂ ಅನುಕೂಲ ಮಾಡಿಕೊಳ್ಳಬೇಕು. ನೀವು ಬರಬೇಕೆಂದು ಮನಸ್ಸು ಮಾಡಿದರೆ ಅಸಾಧ್ಯವಾದುದು ಸಾಧ್ಯವಾಗಬಹುದು. ನೀವು ನಮ್ಮ ನಾಟಕದಲ್ಲಿ ಭಾಗವಹಿಸಿದರೆ ಕಳೆ ಕಟ್ಟುವುದಲ್ಲದೆ ಸಮಾರಂಭವು ಯಶಸ್ವಿಯಾಗುವುದು. ದಯಮಾಡಿ ಇಷ್ಟು ಮಾತ್ರ ನಡಿಯಿಸಿಕೊಡಬೇಕೆಂದು ನನ್ನ ಆಗ್ರಹ" ಎಂದು ಕಾಂತರಾಯನು ಹೇಳಿದ ಮಾತಿಗೆ ಕುಸುಮಳು ಸ್ವಲ್ಪ ಸುಮ್ಮನಿದ್ದು "ಕ್ಷಮಿಸಿರಿ. ನಾಲ್ಕು ಮಂದಿ ಎದುರಿಗೆ, ನಾಟಕದಲ್ಲಿ ಭಾಗವಹಿಸಿ, ಮಾತನಾಡುವುದೆಂದರೆ ನನಗೆ ಹೊಸದು; ಪರಿಪಾಠವಿಲ್ಲ. ಗಾಬರಿಗೊಂಡರೆ ನಿಮ್ಮ ನಾಟಕ ಕೆಡಬಹುದು. ನನಗೆ ಸಂಕೋಚವೆನಿಸುತ್ತದೆ." ಎಂದು ಹೇಳಿದಳು.

''ಚಿಂತೆ ಇಲ್ಲ. ಹೊಸಬರನ್ನು ತಯಾರಿಸುವುದರಲ್ಲಿ ನಮ್ಮ ನಾಟ್ಯಶಾಖೆಯ ಕಾರ್ಯದರ್ಶಿ ಪ್ರಭಾಕರನು ಬಹಳ ಕುಶಲ. ಅಲ್ಲದೆ ಸಾಕಷ್ಟು ರಂಗತಾಲೀಮು ಪ್ರಾಕ್ಟೀಸ್ ಕೊಡಲಾಗುವುದು. ನೀವು ಹಿಂದೆ ಶಾಲೆಯಲ್ಲಿದ್ದಾಗ ಸಣ್ಣ ಸಣ್ಣ ಪಾರ್ಟು, ನೃತ್ಯಗಳನ್ನು ಮಾಡಿರುವಿರಂತೆ. ಕೇಳಿದ್ದೇನೆ. ನನಗೆ ತುಂಬಾ ಭರವಸೆ ಇದೆ. ನೀವು ಚೆನ್ನಾಗಿ ನಟಿಸಬಲ್ಲಿರಿ' ಎಂದು ಒತ್ತಾಯಪಡಿಸಿದ.

''ಪ್ರಭಾಕರರೇ? ಅವರಾರು?''

''ಅವರು? ನಿಮಗೆ ಪರಿಚಯವಿಲ್ಲವೆ? ಪ್ರಭಾಕರನು 1940ರಲ್ಲಿ ನಮ್ಮ ಶಾಲೆಯಲ್ಲಿ ಓದು ಮುಗಿಸಿದ. ಕನ್ಯಾಶುಲ್ಕದಲ್ಲಿ ಇಂದು ಗಿರೀಶನ ಪಾತ್ರ ವಹಿಸುವನು. ಅವನು ಹೆಸರಾದ ನಟನು. ಯಾವ ಪಾರ್ಟನ್ನಾ

ದರೂ ಮಾಡಬಲ್ಲನು. ನೀವು ಒಪ್ಪಿದರೆ ಸಾಕು, ಎಲ್ಲವನ್ನೂ ಅವನೇ ನೋಡಿಕೊಂಡು ಹೋಗುವನು. ನಿಮಗೇಕೆ ಅದರ ಯೋಚನೆ?''

ಕುಸುಮಳು ಸಂತೋಷದಿಂದ ಒಳಗೇ ಹಿಗ್ಗಿದಳು. ತಾನಷ್ಟು ಕುಶಲಳೆಂದು ಹೊಗಳಿಸಿಕೊಳ್ಳುವುದರಲ್ಲಿ ಅವಳಿಗೆ ಹೆಮ್ಮೆ ಎನಿಸಿತು. ಈತ ಹೊಸಬನಾದರೂ ಬಂದ ಸ್ವಲ್ಪ ಸಮಯದಲ್ಲಿ ಎಷ್ಟು ಪರಿಚಯಸ್ಥ ನಂತೆ ಮಾತನಾಡುವನು. ಇಂಥಾ ಹೊಸ ಅನುಭವ ಇವಳಿಗೆ ಒಂದು ವಿಧದ ಹುರುಪನ್ನು ತಂದುಕೊಟ್ಟಿತು. ತಂದೆಯ ಬೇನೆಯ ಬಗ್ಗೆ ಸ್ವಲ್ಪ ಕಲಕಿದ ಇವಳ ಮನಸ್ಸು ದುಃಖವನ್ನು ಮರೆಯುವಂತೆ ಮಾಡಿತು.

''ಅಲ್ಲದೆ, ದಿನವೂ ರಿಹರ್ಸಲ್ಲೂ ಇರುವವೋ ಏನೋ. ಮನೆ ಬಿಟ್ಟು ಬರುವುದಕ್ಕೆ ಪ್ರತಿದಿನವೂ ಅನುಕೂಲವಾಗುವುದೋ ಇಲ್ಲವೋ? ತಂದೆಯವರ ಮೈಯಲ್ಲಿ ಸ್ವಸ್ಥವಿಲ್ಲ" ಎಂದು ಕುಸುಮಳು ಹೇಳಿದಳು.

''ನಿಮ್ಮ ತಂದೆಯವರು ಮನೆಯಲ್ಲೇ ಇರುವರೇನು?''

''ಅಹುದು, ಮೇಲೆ ಮಲಗಿರುವರು, ನಿದ್ದೆ ಹತ್ತಿರುವುದು''.

''ರಿಹರ್ಸಲ್ಲಿಗಾಗಿ ನೀವೇನು ಶ್ರಮಪಡಬೇಕಾಗಿಲ್ಲ. ದಿನವೂ ಒಂದು ಗಂಟೆಕಾಲ ವಿರಾಮ ದೊರೆತರೆ ಸಾಕು. ನಿಮ್ಮ ತಂದೆಯವ ರೊಡನೆ ಹೇಳಿ ಒಪ್ಪಿಗೆಯನ್ನು ಪಡೆಯುತ್ತೇನೆ. ನಮ್ಮ ಸಂಘದ ಅಭಿ ವೃದ್ಧಿಯ ದೃಷ್ಟಿಯಿಂದಲಾದರೂ ನೀವು ಮಧುರವಾಣಿಯ ಪಾತ್ರವನ್ನು ಮಾಡಲೇ ಬೇಕು."

''ಅಲ್ಲರಿ, ಅಂಥಾ ದೊಡ್ಡ ಪಾರ್ಟುಮಾಡಿ ಕೆಟ್ಟುಹೋದರೆ ನನಗೆ ಅಪಕೀರ್ತಿ ಬರುವುದಿಲ್ಲವೆ? ಇನ್ನಾವುದಾದರೂ ಸಣ್ಣ ಪಾರ್ಟು ಆರಿಸಿ ಕೊಡಿರಿ. ಬೇಕಾದರೆ ವೆಂಕಮ್ಮನ ವೇಷ ಹಾಕಲೇನು?'' ಎಂದು ತಪ್ಪಿಸಿಕೊಳ್ಳುವ ಮಾತನಾಡಿದಳು.

''ಛೇ! ಆ ಹಾಳು ವೇಷ ನಿಮಗೇಕೆ? ನಿಮ್ಮಂಥ ನುರಿತ ನಟಿಯ ರಿಗೆ ಅದು ಬೇಡ. ಇಲ್ಲದೇ ಹೋದರೆ, ಬುಚ್ಚಮ್ಮನ ಪಾರ್ಟು ಮಾಡ ಬಹುದಲ್ಲವೆ?"

''ಆ ಅದನ್ನು ಬೇಕಾದರೆ ಖಂಡಿತ ಮಾಡುತ್ತೇನೆ".

ಹೊರಡಲೆಂದು ಕಾಂತರಾಯನೆದ್ದು "ನಿಮ್ಮ ಪಾರ್ಟಿನ ಮಾತು ಕತೆಯನ್ನು ನಾನು ಈ ಸಾಯಂಕಾಲ ಬರೆದು ಕಳಿಸುತ್ತೇನೆ. ರಿಹರ್ಸೆಲ್ಲು ಆರಂಭಿಸುವ ಸಮಯ ನಿಮಗೆ ತಿಳಿಸುತ್ತೇನೆ. ತಾವು ದಯವಿಟ್ಟು ಬರ ಬೇಕು. ಪ್ರಭಾಕರನು ಇವತ್ತೋ ನಾಳೆಯೋ ಬಂದೇ ಬಿಡುವನು" ಎಂದು ಹೇಳಿ ಮನೆಗೆ ಹೋಗುವುದರಲ್ಲಿದ್ದನು. ಅಷ್ಟರಲ್ಲಿ ಕುಸುಮಳ ತಂದೆ ಶ್ರೀಧರ ರಾಯರು ಕೆಳಗಿಳಿದು ಬರುವುದನ್ನು ಕಂಡು ಕಾಂತರಾ ಯನು ಅವರಿಗೆ ನಮಸ್ಕರಿಸಿ "ತಮ್ಮನ್ನು ಕಾಣದೇ ಹೋಗಬೇಕಾಯಿತಲ್ಲ ವೆಂದು ಯೋಚಿಸುತ್ತಿದ್ದೆ. ನೀವೂ ಬಂದಿರಿ ಒಳ್ಳೆಯದಾಯಿತು. ನಿಮ್ಮ ಮಗಳನ್ನು ನಮ್ಮ ಶಾಲೆಯ ಹಳೆಯ ವಿದ್ಯಾರ್ಥಿಗಳ ವಾರ್ಷಿಕೋತ್ಸವದ ವಿನೋದಾವಳಿ ಕಾರ್ಯಕ್ರಮದಲ್ಲಿ ಏರ್ಪಡಿಸಿದ ಕನ್ಯಾಶುಲ್ಕ ನಾಟಕ ದಲ್ಲಿ ಭಾಗವಹಿಸಲು ಕೇಳಿಕೊಂಡೆ. ಇವರು ತಮ್ಮ ಸಹಾನುಭೂತಿ ಅಲ್ಲದೆ ಒಪ್ಪಿಗೆ ತೋರಿ ಬಹಳ ಉಪಕಾರಮಾಡಿದರು. ನಿಮ್ಮ ಅಭ್ಯಂತರ ವೇನೂ ಇರಲಾರದೆಂದು ತಿಳಿಯುತ್ತೇನೆ. ನಮ್ಮ ಈ ಸಮಾರಂಭಕ್ಕೆ ತಾವು ಬಂದೇ ತೀರಬೇಕು. ನಮಗೆ ಸಾಕಷ್ಟು ಪ್ರೋತ್ಸಾಹ ಕೊಡ ಬೇಕೆಂದು ನನ್ನ ಕೋರಿಕೆ" ಎಂದು ವರದಿಯನ್ನೊಪ್ಪಿಸಿದ.

"ಅಗತ್ಯ, ಅಗತ್ಯ ಬರುತ್ತೇನೆ. ಇಂತಹ ಕಾರ್ಯಕ್ರಮಗಳಿಗೆ ಬರುವುದೆಂದರೆ ನನಗೆ ಹೆಚ್ಚಿನ ಉತ್ಸಾಹ."

ಈ ಮಾತುಗಳನ್ನು ಕೇಳಿ ಕಾಂತರಾಯನಿಗೆ ಹೆಚ್ಚಿನ ಸಂತೋಷ ವಾಯಿತು. ಮತ್ತೆ ಇಬ್ಬರಿಗೂ ನಮಸ್ಕರಿಸಿ ಅಲ್ಲಿಂದ ಹೊರಟು ಹೋದ.

ಶ್ರೀಧರ ರಾಯರಿಗೆ ಈಗ ಸ್ವಲ್ಪ ಸಮಾಧಾನವೆನಿಸಿತು; ಏಕಾಂತ ವಾಸದಲ್ಲಿ ಕೊರಗುತ್ತಿದ್ದ ಮಗಳಿಗೆ ಹೊರಗಿನ ಪ್ರಪಂಚದೊಡನೆ ಸಂಪರ್ಕ ಬೆಳೆಯಿಸಲು ಇಂತಹ ಅನುವು ದೊರೆತುದು ಅನುಕೂಲವೆನಿಸಿತು. ಮಗಳು ನಾಲ್ಕು ಮಂದಿಯಲ್ಲಿ ಬೆರೆತು ಸ್ನೇಹ ಬೆಳೆಸಿದರೆ, ವರನನ್ನು ಹುಡುಕುವ ಕಾರ್ಯ ಸುಲಭವಾಗಿ ನೆರವೇರುವುದೆಂದು ರಾಯರು ಒಳಗೇ ಹಿಗ್ಗಿದರು.

"ಅಪ್ಪಾ, ಈಗ ಹೇಗಿದೆ? ನಿದ್ರೆ ಹತ್ತಿತ್ತಲ್ಲ? ಸ್ವಲ್ಪ ವಿಶ್ರಮಿಸ ಬಹುದಾಗಿತ್ತು. ಔಷಧ ತೆಗೆದು ಕೊಳ್ಳುವೆಯಾ?"

"ಆಗಲಮ್ಮಾ; ಊಟವಾದ ನಂತರ ತೆಗೆದುಕೊಂಡರಾಯಿತು. ಇರಲಿ, ಈತನ ಪರಿಚಯ ಮೊದಲು ನಿನಗಾಗಿತ್ತೇನು?''

"ಇಲ್ಲವಲ್ಲ''.

"ಬಹಳ ಗಟ್ಟಿಗನಂತೆ ಕಾಣುತ್ತಾನಲ್ಲವೆ? ಒಂದು ಮಾತಿಗೆ ಹತ್ತು ಮಾತು. ಜಿಗಳಿಯ ಹಾಗೆ ಇವನ ಸಹವಾಸಾಂತ ಕಾಣುತ್ತದೆ. ಮಾತ ನಾಡುವಾಗ ನೀರಿನ ಹಾಗೆ ಎಡೆತಡೆ ಇಲ್ಲದೆ ಮುಂದುವರಿಸುತ್ತಾನೆ. ಹೊಸಬರೆಂಬ ಸಂಕೋಚವೇ ಇಲ್ಲ''

"ನನಗೂ ಹೀಗೆನಿಸಿತು. ಮಾಡುವುದೇನು? ಅವನ ಉತ್ಸಾಹಕ್ಕೆ ಕುಂದು ಬರಬಾರದೆಂದು ಸುಮ್ಮನಿದ್ದೆ''.

"ಅಲ್ಲ, ಏನೋ ವೇಷಾ ಹಾಕಲು ಒಪ್ಪಿಕೊಂಡೆಯಂತೆ!''

"ಆಗಲಿಯೆಂದು ಹೇಳೀನಿ, ಆ ಮೇಲೆ ನೋಡಿದರಾಯಿತು. ಈಗ ದರ ಅವಸರವೇನು?"

''ಹಾಗಂದರೇನು ತಾಯಿ? ಖಂಡಿತ ಹಾಕು. ವೇಷ ಹಾಕಿದರೆ ನಿನಗೇನು? ಮಾತು ಕೊಟ್ಟ ಮೇಲೆ ಅದರಂತೆ ನಡೆಯಲೇ ಬೇಕು.''

''ನಿಮ್ಮಿಷ್ಟ ಅಪ್ಪ. ನಿಮಗೆ ಸಂತೋಷವೆನಿಸುವ ಕೆಲಸ ಮಾಡುವುದೆಂದರೆ ನನಗೆ ಹೆಚ್ಚು ಕುತೂಹಲ.''

ಅಂದು ಸಾಯಂಕಾಲ ಹೊತ್ತಿಗೆ ಬುಚ್ಚಮ್ಮನ ವೇಷದ ಮಾತು ಗಳೆಲ್ಲವನ್ನೂ ಬರೆದು ಕಾಂತರಾಯನು ಕಳಿಸಿದ. ಅದರೊಂದಿಗೆ ಸಣ್ಣ ಕಾಗದದಲ್ಲಿ ಪ್ರಭಾಕರನು ಅಂದು ರಾತ್ರಿ ಖಂಡಿತ ಬರುವುದರಿಂದ ಮಾರನೆಯ ದಿನ ಮುಂಜಾನೆ ಒಂಭತ್ತು ಗಂಟೆಗೆ ತಮ್ಮ ಮನೆಯಲ್ಲಿ ರಿಹರ್ಸಲ್ಸ ನಡೆಯುವುದರಿಂದ ಬರಬೇಕೆಂದು ತಿಳಿಸಿದ್ದ. ತಮ್ಮ ಮನೆ ಯಿರುವ ಗುರುತನ್ನೂ ಸೂಚಿಸಿದ್ದ.

ಮಲಗುವ ಮುನ್ನ ಕುಸುಮಳು ತನ್ನ ವೇಷದ ಮಾತುಗಳೆಲ್ಲ ವನ್ನೂ ನಿಧಾನವಾಗಿ ಒಂದು ಸಲ ಓದಿದಳು. ರಾತ್ರಿಯೆಲ್ಲವೂ ನಾಟಕ ದಲ್ಲಿಯ ದೃಶ್ಯಗಳನ್ನೇ ಕನಸಿನಲ್ಲಿ ಕಂಡಳು.

೪

ಕಾಂತರಾಯನ ಮನೆಯಲ್ಲಿ ಎಲ್ಲರೂ ನೆರೆದಿದ್ದರು. ಪ್ರಭಾಕರನಿಗೆ ಕಾಂತರಾಯನು ಸೇರಿದ ಜನರ ಪರಿಚಯವನ್ನು ಮಾಡಿಕೊಟ್ಟ ನಂತರ, "ಅಗ್ನಿ ಹೋತ್ರಾವಧಾನಿಯ ವೇಷ ಯಾರು ಮಾಡುವರು? ನೀನು ಮಾಡುವಿಯೇನು? ಸುಲಭವಲ್ಲವಯ್ಯಾ. ಹೆಸರಿಗೆ ತಕ್ಕಂತೆ ನೀನು ಕಣ್ಣುಗಳಿಂದ ಕೆಂಡ ಕಾರಬೇಕಾಗುತ್ತದೆ. ಮಾತಿನ ರಭಸದಲ್ಲಿ ಕೆಂಡಗಳ ಕಿಡಿಗಳು ಚಿಮ್ಮಬೇಕು. ತಿಳಿಯಿತೇ? ಜಲಸೂತ್ರಾವಧಾನಿಯಂತೆ ನೀರಸವಾಗಿದ್ದರೆ ಪ್ರಯೋಜನವಿಲ್ಲ. ಮಧುರವಾಣಿ ಎಲ್ಲಿ? Where is my Madhurvani?" ಎಂದು ಬೇರೊಬ್ಬನನ್ನು ನೋಡಿ, ಅಸಮ್ಮತಿಯನ್ನು ಸೂಚಿಸುತ್ತ "Dam' it. ನಾಟಕವು ನಡೆದ ಹಾಗೆ. ನಿನ್ನ ಕಟ್ಟಿಕೊಂಡು ನಾನು ಅಳಬೇಕು ನೋಡು" ಎಂದು ಹಾಸ್ಯ ಮಾಡಿದ.

"ಅಲ್ಲೋ ಪ್ರಭಾಕರ್, ಇದೇ ಧೋರಣೆಯಲ್ಲಿ ಶ್ರೀಮತಿ ಕುಸುಮಳಲ್ಲಿ ಹಾಸ್ಯಮಾಡಿದೆಯೆಂದರೆ, ಅನರ್ಥವಾದೀತು" ಎಂದು ಕಾಂತನು ಹೇಳುತ್ತಿರುವ ಹೊತ್ತಿಗೆ ಕುಸುಮಳು ಒಳಗೆ ಬರುತ್ತ "ಅಂಥಾ ಅನರ್ಥವೇನೂ ಆಗುವುದಿಲ್ಲ. ಆದರೆ ಮಾತಿನಲ್ಲಿ ಸೋಲುವ ಸ್ವಭಾವದವಳಲ್ಲ ನಾನು. ಅದು ಮೊದಲು ತಿಳಿದಿರಲಿ" ಎಂದು ಹೇಳಿ ಮಾತಿಗೆ ಮಾತು ಜೋಡಿಸಿದಳು.

ಕಾಂತರಾಯನು "ಇವರೇ ಶ್ರೀಮತಿ ಕುಸುಮಾ ದೇವಿಯವರು. ಈ ಶಾಲೆಯ ಓಲ್ಡ್ ಗರ್ಲ್. ಬುಚ್ಚಮ್ಮನ ವೇಷವನ್ನು ಮಾಡುವೆನೆಂದು ಒಪ್ಪಿರುವರು" ಎಂದು ಕುಸುಮಳ ಪರಿಚಯ ಪ್ರಭಾಕರನಿಗೆ ಮಾಡಿಕೊಟ್ಟ.

ಪ್ರಭಾಕರನು ಕುಸುಮಳನ್ನು ಒಂದೇ ಸವನೆ ದಿಟ್ಟಿಸಿ ನೋಡುತ್ತ ಅವಾಕ್ಕಾಗಿ "How beautiful quite unexpected. ಕ್ಷಮಿಸಬೇಕು. ತಮ್ಮಂಥ ಸುಂದರಮೂರ್ತಿಯ ಬಗ್ಗೆ ಮನಸ್ಸಿನಲ್ಲಿ ಉಂಟಾದ ಭಾವನೆಯನ್ನು ನಿಷ್ಕಪಟತನದಿಂದ ವ್ಯಕ್ತಗೊಳಿಸಿದೆ. ನೀವು ಬೇರೆ

ತಿಳಿಯಬಾರದೆಂದು ನನ್ನ ಬಿನ್ನಹ" ಎಂದು ನಟಿಸಿದ. ಇವನ ನಟನೆ ಯುಕ್ತ ಮಾತಿಗೆ ಎಲ್ಲರೂ ಒಂದೇ ಸಲ ನಕ್ಕು ಬಿಟ್ಟರು.

ಅಂದು ನಾಟಕದ ಪ್ರ್ಯಾಕ್ಟೀಸಿಗೆಂದು ಸೇರಿದವರಲ್ಲಿ ಎಲ್ಲರೂ ನಕ್ಕು ನಲಿದು ಸಂತೋಷದಲ್ಲಿ ಮಗ್ನರಾದರು. ಮನೆಯಲ್ಲಿ ಒಬ್ಬಳೇ ಇದ್ದು ಬೇಸರಗೊಂಡು ಕುಸುಮಳಿಗೆ ಇಂತಹ ಯುವಕರ ನಡುವೆ ಇರುವುದು ಮನಸ್ಸಿಗೆ ಹಗುರೆನಿಸಿಸಿತು. ಕುಸುಮಳಿಗೆ ಮನೆಯಲ್ಲಿ ಅಡಗಿರುವುದು ಬೇಡಾಗಿತ್ತು. ಆದರೆ ಬೀದಿ ಬೀದಿ ಅಲೆದು ಅವಮರ್ಯಾದೆಯ ಕೆಲಸ ಗಳನ್ನು ಮಾಡಿ, ಕುಲಹೀನರಂತಿರುವುದು ಇವಳಿಗೆ ಸೇರದು. ಏನು ಮಾಡಿದರೂ ಜನರು ಮೆಚ್ಚುವಂತಹದಾಗಿದ್ದುವು ಕುಸುಮಳ ಮಾತಿನ ಮತ್ತು ನಡತೆಯ ರೀತಿ ನೀತಿಗಳು.

ಶಾಲೆಯ ಹಳೆಯ ವಿದ್ಯಾರ್ಥಿಗಳ ಸಮಾವೇಶದ ಕಾರಣದಿಂದ ಕುಸುಮಳಿಗೆ ಹೊಸ ಚೈತನ್ಯ ಬಂದಂತಾಯಿತು. ಇವಳಲ್ಲಿ ಉಂಟಾದ ಈ ನವೀನ ವಿಕಾಸವನ್ನು ಶ್ರೀಧರರಾಯರು ಗುರುತಿಸಿ ಅನಾಥೆಯಾದ ತನ್ನ ಮಗಳಲ್ಲಿ ಆಗುತ್ತಲಿದ್ದ ಬದಲಾವಣೆ ಅವಳ ಭಾವೀ ಜೀವನದ ಸಮಸ್ಯೆಯನ್ನು ಬಗೆಹರಿಸಲು ಅನುಕೂಲವಾಗುವುದೆಂದು ಹಿಗ್ಗಿದನು. ಇದು ಅವನಿಗೆ ಮಾನಸಿಕ ಸುಖವನ್ನು ತಂದು ಕೊಟ್ಟಿತು. ಬೇಗ ಬೇಗನೆ ಗುಣವಾಗಬಹುದೆಂಬ ಆಸೆಯೂ ಅವನಲ್ಲಿ ತಲೆದೋರಿತು.

ಇನ್ನೇನು, ಇವರು ನೆರವೇರಿಸಲೆಣಿಸಿದ ವಾರ್ಷಿಕೋತ್ಸವದ ದಿನವು ಸಮೀಪಿಸಿತು. ಅಂದು ದಿನವೆಲ್ಲಾ ಕುಸುಮಳು ಮನೆಯಲ್ಲಿರಲಿಲ್ಲ. ತಮ್ಮ ನಾದ ಗೋಪಾಲರಾಯನಿಗೆ ಶ್ರೀಧರನು ಪತ್ರ ಬರೆದಿದ್ದನು. ಬಂದು ಮನೆಯಲ್ಲಿ ವಿಷಯ ಮಾತನಾಡಿಕೊಂಡು ಹೋಗಬೇಕೆಂದು ಕೇಳಿಕೊಂ ಡಿದ್ದನು.

೫

ಗೋಪಾಲರಾಯನು ಬಹಳ ಸಿಡುಕಿನ ಸ್ವಭಾವದವನು. ಅಣ್ಣನನ್ನು ನೋಡದೇ ಬಹಳ ವರ್ಷಗಳಾಗಿದ್ದವು. ಪತ್ರ ವ್ಯವಹಾರವೂ ನಿಂತು ಹೋಗಿತ್ತು. ಇವನು ತನ್ನಣ್ಣನೆಂಬ ಮಮತೆಯು ಕೂಡ ಇರಲಿಲ್ಲ. ತನ್ನ ಪಾಲಿಗೆ ಅಣ್ಣನಿಲ್ಲವೆಂದೇ ಭಾವಿಸಿದ್ದನು. ವೇಶ್ಯೆಳನ್ನು ಮದುವೆಯಾಗಿ, ಮನೆಯವರೆಲ್ಲರನ್ನೂ ಬಿಟ್ಟು ದೂರವೇ ಇದ್ದುದರಿಂದ ಜಾತಿಯನ್ನು ತೊರೆದ ನೀಚನೆಂದು ಅವನ ಇರುವಿಕೆಯನ್ನೇ ಅಲಕ್ಷಿಸಿದ್ದನು. ಯಾರು ಸುಮ್ಮನಿದ್ದರೂ ಗೋಪಾಲನು ಮಾತ್ರ ಇದು ಬಹಳ ಕೆಟ್ಟ ಕೆಲಸವೆಂದು ಊರಲ್ಲೆಲ್ಲಾ ದೂರಿ, ಆಡಬಾರದ ಮಾತುಗಳನ್ನಾಡಿ, ಶ್ರೀಧರನ ಮನಸ್ಸನ್ನು ನೋಯಿಸಿ, ತಮ್ಮಿಂದ ದೂರಿರುವಂತೆ ಮಾಡಿದ್ದನು. ಅವನ ಹೆಸರೆಂದರೆ ರೇಗಿ ಬೀಳುತ್ತಿದ್ದ. ಅಪಪ್ರಚಾರ ಮಾಡಿ ಶ್ರೀಧರನು ಜೀವಿಸುವುದನ್ನು ಕಷ್ಟವಾಗುವಂತೆ ಮಾಡಿದ್ದ.

ಲೋಕವೆಲ್ಲವೂ ಇವನ ಮದುವೆಯ ವಿಷಯ ಮರೆತು ಹೋಗಿದ್ದರೂ ಗೋಪಾಲನಿಗೆ ಅದು ಮಾಯದ ಹುಣ್ಣಾಗಿದ್ದಿತು. ತನ್ನ ದ್ವೇಷದಿಂದಲೂ ಅಪಪ್ರಚಾರದಿಂದಲೂ ಅವನು ತಲೆ ಎತ್ತಲಾರದವನಾಗುವನೆಂದು ತಿಳಿದಿದ್ದ. ಆದರೆ ನಡತೆಯಲ್ಲಿ ನೀಚತನವನ್ನರಿಯದ ಶ್ರೀಧರನಿಗೆ ದೇವರು ಎಲ್ಲ ಅನುಕೂಲಗಳನ್ನೊದಗಿಸಿ ಕೊಡುತ್ತಿದ್ದುದು, ವ್ಯಾಪಾರದಲ್ಲಿ ಅವನು ಪ್ರಗತಿ ಹೊಂದುತ್ತಿದ್ದುದು, ಧನವಂತನಾಗಿ ನಿಶ್ಚಿಂತನಾಗಿದ್ದುದು, ಗೋಪಾಲನಿಗೆ ಬೇಡಾದ ವಿಷಯಗಳಾಗಿದ್ದವು. ಆದರೂ ಶ್ರೀಧರನನ್ನು ಮಾತನಾಡಿಸುವ ಗೋಜಿಗೆ ಹೋಗಿರಲೇ ಇಲ್ಲ. ತಮ್ಮನ ಈ ನೀಚ ವೃತ್ತಿಗೆ ಶ್ರೀಧರನು ಮನದಲ್ಲಿಯೇ ಕೊರಗಿದ. ತಾನು ಮದುವೆಯಾದ ಹೆಣ್ಣಿನ ಕುಲವಾವುದೇ ಇರಲಿ, ಅವಳ ನಡತೆ ಮಾತ್ರ ಇತರರು ಅನುಕರಿಸುವಂತಹದಾಗಿದ್ದಿತು. ಸುಗುಣಗಳಿಂದ ಕೂಡಿದ ಅವಳ ನಡತೆಯ ಬಗ್ಗೆ ಇಲ್ಲ ಸಲ್ಲದ ದೋಷಗಳನ್ನು ಬಯಲಿಗೆಳೆದು, ಅವಳ ಹೆಸರಿಗೆ ಕಳಂಕವನ್ನುಂಟುಮಾಡುವ ಇವನ ರೀತಿಗೆ ಮರುಗಿದ; ಮನಸ್ಸಿನಲ್ಲಿಯೇ ನೊಂದು ಕೊಂಡ. ಅಂದಿಗೆ ಹತ್ತು ಹನ್ನೆರಡು

ವರುಷಗಳಾಗಿರಬಹುದು ಗೋಪಾಲನನ್ನು ನೋಡದೆ. ಪತ್ರ ವ್ಯವಹಾರವೂ ಅಂದಿನಿಂದ ನಿಂತುಹೋಗಿತ್ತು. ಯಾವ ಬಗೆಯ ಸಂಪರ್ಕವೂ ಇರಲಿಲ್ಲ.

ಆದರೆ ಇಂದೇತಕ್ಕೊ ತಮ್ಮನ ನೆನಪಾಯಿತು. ಇವನಿಗೆ ತಮ್ಮನ ಮೇಲೆ ವಿಶ್ವಾಸವಿನ್ನೂ ಇತ್ತು. ಸೀಳಿ ಹೋದ ಹಾದಿಗಳೆರಡು ಪುನಹ ಸೇರಬಹುದೆಂಬ ಆಸೆ ಉಂಟಾಯಿತು. ಭಿನ್ನ ಅಭಿಪ್ರಾಯಗಳಿಂದ ಎರಡಾದ ಅವರ ಮನಸ್ಸುಗಳು ಒಂದುಗೂಡಬಹುದೆಂಬ ಭರವಸೆ ತಲೆದೋರಿತು. ಗೊಪಾಲನು ತಾನುಮಾಡಿದ ತಪ್ಪು ಕ್ಷಮಿಸಿ ಪುನಃ ಸ್ನೇಹ ಬೆಳೆಸುವನೆಂದು ತಿಳಿದನು. ತಮ್ಮ ಮನಸ್ತಾಪಕ್ಕೆ ಕಾರಣಗಳಾದ ತನ್ನ ಹೆಂಡತಿ ಈಗ ಜೀವಂತ ಇಲ್ಲದಿದ್ದುದರಿಂದ, ಅವನು ಮತ್ತೆ ತನ್ನ ಮನೆಗೆ ಬಂದು ಹಿಂದಿನಂತೆ ಇರಬಹುದೆಂದು ನೆನೆದನು. ಅಕಸ್ಮಾತ್ ಏನಾದರೂ ವಿಪತ್ತು ಬಂದರೆ, ಕುಸುಮಳಿಗೆ ಗೋಪಾಲನಿಗಿಂತ ಹತ್ತಿರದವರಾರು? ಆದುದರಿಂದ ಅವನನ್ನು ಬರಮಾಡಿಕೊಂಡು ತನ್ನ ಆಸ್ತಿಯ ವಿವರಗಳನ್ನು ತಿಳಿಸಿ, ಮುಂದಿನ ವ್ಯವಸ್ಥೆ ಮಾಡುವುದು ಒಳ್ಳೇಯದೆಂದು ತರ್ಕಿಸಿ ಪತ್ರ ಬರೆದಿದ್ದ.

ಈಗ ಗೋಪಾಲನೂ ಇತರರ ಸಹಾಯ ಬೇಡುವ ಸ್ಥಿತಿಯಲ್ಲಿದ್ದ. ಸಂಸಾರ ದೊಡ್ಡದಾಗಿದ್ದಿತು. ಸಂಪಾದನೆ ನಿಂತುಹೋಗಿತ್ತು. ತಮ್ಮನಿಗೆ ಸಹಾಯ ಮಾಡುವುದು ತನ್ನ ಕರ್ತವ್ಯವೆಂದು ಶ್ರೀಧರ ತಿಳಿದ. ಹಿಂದಿನ ಮಾತಿನ ಕಠೋರತೆ, ಜಗಳದ ಕಂತೆ ಎಷ್ಟಿದ್ದರೇನು? ಇವುಗಳು ಬಾಂಧವ್ಯದ ಗಂಟನ್ನು ಸಡಲಿಸಬಹುದೇ? ಆದುದರಿಂದ ತಮ್ಮನಿಗೆ ಸಹಕಾರದ ಕೈ ನೀಡುವುದು ಇವನ ಮುಖ್ಯ ಕರ್ತವ್ಯವಾಗಿತ್ತು. ಇದ್ದ ಉದ್ಯೋಗವನ್ನು ಕಳೆದುಕೊಂಡು, ತಂದೆಯವರು ಸಂಪಾದಿಸಿದ ಮನೆ ಮಾರಿ, ಗೋಪಾಲನು ಹಳ್ಳಿ ಸೇರಿದ್ದ. ಹೊಲಗಳಿಂದ ಸ್ವಲ್ಪ ಉತ್ಪನ್ನ ದೊರೆತರೂ ಮಕ್ಕಳು, ಮುಂದಿ ಬಳಗ ದೊಡ್ಡದಿರುವುದರಿಂದ ಸಂಸಾರ ನಡೆಸುವುದು ಬಹಳ ಕಷ್ಟವಾಗಿತ್ತು. ಇಂತಹ ಕಷ್ಟ ಸಮಯದಲ್ಲಿ ಗೋಪಾಲನಿಗೆ ಸಹಾಯ ಮಾಡಿದರೆ, ತನಗೆ ಮನಶ್ಶಾಂತಿ ದೊರೆಯುವುದೆಂದು ಭಾವಿಸಿದ.

ಇದೆಲ್ಲವನ್ನೂ ಯೋಚನೆ ಮಾಡಿ, ಶ್ರೀಧರರಾಯ ತಮ್ಮನಿಗೆ ಪತ್ರ ಬರೆದ—ಪತ್ರ ಸೇರಿದ ಮೂರು ದಿನಗಳೊಳಗೆ ಬಂದೇ ತೀರಬೇಕೆಂದು; ಹಾಗನುಕೂಲವಾಗದಿದ್ದರೆ ಬರಕೂಡದೆಂದು ಸೂಚಿಸಿದ್ದ. ಪತ್ರದಕೊನೆಯಲ್ಲಿ " ನಾನು ನಿನ್ನಲ್ಲಿಗೆ ಬರುವ ಯೋಗ್ಯತೆ ಇದ್ದಿದ್ದರೆ ನಾನೇ ಬರುತ್ತಿದ್ದೆ" ಎಂಬ ವಾಕ್ಯವನ್ನು ಬರೆದಿದ್ದ. ಬೇಕೆಂತಲೇ ಈ ವಾಕ್ಯ ಸೇರಿಸಿದ್ದ. ಇದರಿಂದ ಗೋಪಾಲನು ಸಮಾಧಾನ ಹೊಂದಿ ಬಂದೇ ತೀರುವನೆಂದು ಆಶಿಸಿದ. ಕಾಗದವನ್ನು ಪೋಸ್ಟಿನಲ್ಲಿ ಹಾಕಿದ ನಂತರ ಇವನ ಯೋಚನೆಗಳು ಹೆಚ್ಚಿದವು. ಗೋಪಾಲನು ಬಂದ ನಂತರ ಏನೇನು ಮಾತನಾಡಬೇಕೆಂಬುದನ್ನು ಯೋಚಿಸತೊಡಗಿದ. ಕುಸುಮಳ ವಿಷಯ ಹೇಳಬೇಕೆ, ಅಥವಾ ಸುಮ್ಮನೇ ಕ್ಷೇಮ ಸಮಾಚಾರ ವಿಚಾರಿಸಿ, ಸ್ವಲ್ಪ ಹಣಕೊಟ್ಟು ಕಳಿಸಿ ಬಿಡಬೇಕೆ, ಎಂದು ಯೋಚಿಸತೊಡಗಿದ. ಅವನು ಸಿಟ್ಟಿಗೆದ್ದರೇನು ಮಾಡಬೇಕು? ಕುಸುಮಳ ಜೀವನದ ಭಾರವನ್ನು ಅವನು ಆಸ್ಥೆಯಿಂದ ವಹಿಸುವನೇ? ಸುಳ್ಳು ಹೇಳಿ ಮೋಸಮಾಡಿದರೆ, ಮುಂದೆ ಕುಸುಮಳ ಗತಿ? ಸ್ವಲ್ಪ ಹಣ ಬ್ಯಾಂಕಿನಲ್ಲಿ ಅವಳ ಹೆಸರಿನಲ್ಲಿದೆ. ಸ್ಥಿರಾಸ್ತಿಯನ್ನು ಇನ್ನೂ ಅವಳ ಹೆಸರಿನಲ್ಲಿ ಬರೆದಿಟ್ಟಿಲ್ಲ. ಆದರೆ ಅವಳಿನ್ನೂ ಮೈನರು. ಹೆಚ್ಚು ಶ್ರದ್ಧೆಯಿಂದ ಕೆಲಸಮಾಡಿ ಇವುಗಳೆಲ್ಲವನ್ನೂ ಸರಿಪಡಿಸಬೇಕೆದಂರೆ, ಮಲಗಿದವನು ಏಳುವಂತಿಲ್ಲ. ತಮ್ಮನಾದ ಗೋಪಾಲನು ಬಂದರೆ ಎಲ್ಲವೂ ಅನುಕೂಲವಾಗಬಹುದೆ? ಅವನು ಸಹಾಯಕನಾಗುವನೆ? ಬಂದವನೇ ಸಿಡುಕಿನಿಂದ ರೇಗಿದರೆ ಹೇಗೆ? ಇಂಥ ಯೋಚನೆಗಳೊಂದಿಗೆ ಆ ರಾತ್ರಿ ಶ್ರೀಧರನು ಕಳೆದ.

ಗೋಪಾಲನನ್ನು ಬರಹೇಳಿದ ದಿನವೇ ಶಾಲೆಯ ವಾರ್ಷಿಕೋತ್ಸವದ ದಿನ. ಹಿಂದಿನ ರಾತ್ರಿ ಶ್ರೀಧರನಿಗೆ ಎದೆ ನೋವು ಬಹಳ ಹೆಚ್ಚಾಯಿತು. ರಾತ್ರಿ ಹೊತ್ತಾಗಿ ಬಂದಿದ್ದುದರಿಂದ ಮಗಳನ್ನು ಎಬ್ಬಿಸಲು ಮನಸ್ಸಿರಲಿಲ್ಲ. ನೋವು ಮಾತ್ರ ಹೆಚ್ಚಾಗುತ್ತಿತ್ತು; ಸಹಿಸಲಾರದೆ ವೇದನೆಯಿಂದ ರಾತ್ರಿ ಕಳೆಯುವೆನೋ ಇಲ್ಲವೋ ಎಂಬ ಭಯ ಬೇರೆ. ಕುಸುಮಳ ನಿದ್ದೆ ಕೆಡಬಾರದೆಂದು ಶ್ರೀಧರನು ಮೆಲ್ಲಗೆ ವರಾಂಡಕ್ಕೆ ಬಂದ. ಆರಾಮಾಸನದಲ್ಲಿ ಮಲಗಲು, ಸ್ವಲ್ಪ ಹಗುರೆನಿಸಿತು; ನಿದ್ದೆಯೂ ಬಂತು.

ಶಾಲೆಯ ವಾರ್ಷಿಕೋತ್ಸವದ ದಿನ ಬೇಗನೆ ಎದ್ದು, ಎಲ್ಲವನ್ನೂ ಮುಗಿಯಿಸಿ, ತಂದೆಗೆ ಔಷಧ ಪಥ್ಯಪಾನಾದಿಗಳನ್ನಿತ್ತು, ಎಂಟು ಗಂಟೆಗೆ ಅಲಂಕಾರ ಮಾಡಿಕೊಂಡು ತಂದೆಗೆ ಊಟದ ಹೊತ್ತಿಗೆ ಗಾಡಿ ಮಾಡಿಕೊಂಡು ಶಾಲೆಗೇ ಬಂದುಬಿಡಬೇಕೆಂದು ಹೇಳಿ ಕುಸುಮಳು ಹೊರಟು ಹೋದಳು. ಹೋಗುವಾಗ ಶ್ರೀಧರನಿಗೇಕೋ ಮನಸ್ಸು ತಳಮಳವೆನಿಸಿತು. ಒಂದು ಬಗೆಯ ಅಸಂತೃಪ್ತಿ ತಲೆದೋರಿತು. ತನ್ನ ಕುಸುಮಳು ಅಷ್ಟು ಚೆಲುವಾಗಿ ಅಲಂಕರಿಸಿಕೊಂಡು ಹೋಗುತ್ತಿದ್ದುದು ಅವನಿಗೆ ಹಿಂದಿನ ಅನೇಕ ವಿಷಯಗಳ ನೆನಪು ತಂದುಕೊಟ್ಟಿತು. ಅವಳನ್ನು ಹತ್ತಿರ ಕರೆದು ಮಮತೆಯಿಂದ ಮೈದಡವಿ "ಹೋಗಿ ಬಾ ಮಗೂ! ಜೋಕೆ, ಜನಸಂದಣಿಯಲ್ಲಿ ಹುಚ್ಚುಳಂತಿರಬೇಡ. ನಿಮ್ಮ ಉತ್ಸವಕ್ಕೆ ಸಾಯಂಕಾಲ ಬರುತ್ತೇನೆಂದು ಹೇಳು. ನಿಮ್ಮ ಸಮಾರಂಭವು ಯಶಸ್ವಿಯಾಗಿ ಕೊನೆಗಾಣಲಿ. ನಾಳೆ ತಾನೆ ನಿಮ್ಮ ನಾಟಕದ ಕಾರ್ಯಕ್ರಮ? ನಾಳೆಯೂ ಖಂಡಿತ ಬರುತ್ತೇನೆ" ಎಂದು ಹೇಳಿ ಕಳಿಸಿದ.

ಕುಸುಮಳು ಮನೆಬಿಟ್ಟು ಹೊರಬಿದ್ದು ಹೋಗುವಾಗ, ಶ್ರೀಧರನಿಗೆ ತನ್ನ ಮಗಳನ್ನು ಯಾರೋ ದೂರ ಎಳೆದುಕೊಂಡು ಹೋಗುತ್ತಿರುವಂತೆ ಭಾಸವಾಯಿತು. ಒಂದು ಬಗೆಯ ವಿರಹ ವೇದನೆಯುಂಟಾಯಿತು.

ಇನ್ನೇನು, ಒಂಭತ್ತು ಗಂಟೆ ರೈಲಿಗೆ ಗೋಪಾಲನು ಬರುವ ವೇಳೆಯೂ ಹತ್ತಿರ ಬಂತು. ಅವನು ಬರುವ ಹೊತ್ತಿಗೆ ಕುಸುಮಳು ಮನೆಯಲ್ಲಿರಬಾರದೆಂದು ಶ್ರೀಧರನ ಆಶೆ. ತಮ್ಮಿಬ್ಬರಲ್ಲಿ ನಡೆಯುವ ಮಾತುಗಳು ಕುಸುಮಳಿಗೆ ತಿಳಿಯಬಾರದೆಂದು ಅವನ ಇಚ್ಛೆ. ಹಿಂದಿನ ರಾತ್ರಿ ತನಗುಂಟಾದ ಎದೆನೋವನ್ನು ನೆನೆದರೆ, ಗೋಪಾಲನನ್ನು ಬರಹೇಳಿದ್ದು ಒಳಿತೆಂದು ಸಂತೋಷಗೊಂಡ. ಕುಸುಮಳಿಗೆ ಗೋಪಾಲನಿಗಿಂತಲೂ ಹತ್ತಿರದವರಿನ್ನಾರು?

ಹೀಗೆಂದು ಯೋಚಿಸುತ್ತಾ ಮೊಗಸಾಲೆಯಲ್ಲಿ ಹೆಜ್ಜೆ ಹಾಕುತ್ತಾ ಸ್ವಲ್ಪ ಸಮಯ ಕಳೆಯಲು ಹೊತ್ತಿಗೆ ಸರಿಯಾಗಿ ಗೋಪಾಲನು ಬಂದೇ ಬಿಟ್ಟ. ತಮ್ಮನನ್ನು ನೋಡಿದ ಕೂಡಲೇ ಸೋದರ ಪ್ರೇಮ ಉಕ್ಕಿ

ಬಂದು ಎಲ್ಲವನ್ನೂ ಮರೆಯುವೆನೆಂದು ನೆನೆದಿದ್ದ. ಆ ಮಿಲನದಲ್ಲಿ ಬಂಧು ಪ್ರೇಮ ಬೆಳೆದು ತಮ್ಮ ಮನೆತನ ಮುಂದರಿಯುವುದೆಂದು ತಿಳಿದಿದ್ದ. ಆದರೆ ಗೋಪಾಲನ ಮುಖದಲ್ಲಿಯ ರೋಷ, ಅವನ ದುಷ್ಟ ನೋಟ, ಹಲ್ಲು ಕಡಿಯುವ ಸ್ವಭಾವ ಇವುಗಳೆಲ್ಲವನ್ನೂ ಪ್ರಥಮದಲ್ಲಿ ಕಂಡ ಕೂಡಲೇ ಅವನ ಆಶಾಗೋಪುರ ಕಳಚಿ ಬಿದ್ದಿತು. ಆಗಿನ ಅವನ ಮುಖದಲ್ಲಿಯ ಲಕ್ಷಣ ನೋಡಿ ಪ್ರೇಮದ ಬದಲು ಅಸಹ್ಯ ಹೆಚ್ಚಿತು. ಎದೆನೋವು ಮತ್ತೆ ಸ್ವಲ್ಪ ತಲೆದೋರಿತು. ಅಲ್ಲಿಯೇ ಇದ್ದ ಮಂಚದ ಮೇಲಿನ ಹಾಸಿಗೆಗೆ ಮೆಲ್ಲನೆ ಒರಗಿದ.

"ನನ್ನನ್ನೇತಕ್ಕೆ ಬಾ ಎಂದು ಕರೆಸಿದ್ದು? ಅದರ ಕಾರಣ ವೇನೇಂಬುದನ್ನು ಕಾಗದದಲ್ಲಿ ಬರೆದಿದ್ದರೇನಾಗುತಿತ್ತು? ಏನೋ—" ಎಂದು ಕೋಪದಿಂದ ಗುಡುಗಿದ ಗೋಪಾಲ.

"ಸ್ವಲ್ಪ ಕೂಡಪ್ಪಾ, ನಿಧಾನವಾಗಿ ಮಾತನಾಡೋಣ. ಯಾಕಷ್ಟು ಅವಸರ?"

"ಏನಂತಹ ಮಹತ್ವದ ವಿಷಯ?"

"ವಿಷಯ ಬಹಳ ಇದೆ. ಕಾಗದದಲ್ಲಿ ಬರೆಯಲು ಆಗಲಿಲ್ಲ."

"ಇವತ್ತೇ ಬಂದುಬಿಡೆಂದು ಬರೆದಿದ್ದಿ. ಎರಡು ದಿನ ನಿಂತು ಬಾಯೆಂದು ಬರೆದಿದ್ದರೆ ನಿನೇನು ಸಾಯ್ತಿದ್ದೇನು? ವಿಷಯ ವೇನೆಂಬೋದು ಕೂಡಲೇ ಹೇಳಿಬಿಡು. ನಾನು ಮತ್ತೆ ಇವತ್ತೇ ಹೊರಡಬೇಕು. ಹನ್ನೆರಡರ ಗಾಡಿಗೆ ಹೊರಡಲೇ ಬೇಕು. ಮನೇಲಿ ನನಗಾಗಿ ಕಾದಿರುವರು ರೈತರು."

"ಗೋಪೂ, ಇನ್ನೂ ನೀನು ಸುಧಾರಿಸಲಿಲ್ಲವಲ್ಲ? ಇಷ್ಟು ಅವಸರ ದಿಂದ ಹಿಂದಿರುಗುವಿ ಎಂದು ನಾನೆಣಿಸಲಿಲ್ಲ. ಇರಲಿ, ಮುಖ್ಯವಾದ ವಿಷಯ ಎರಡೇ ಮಾತಿನಲ್ಲಿ ಹೇಳಿಬಿಡುತ್ತೇನೆ. ನನಗೆ ಎದೆ ನೋವಿನ ಬೇನೆ ಬಲವಾಗತೊಡಗಿದೆ. ಇಂದು, ಯಾವಕ್ಷಣ ಸಾಯುವೆನೋ ಗೊತ್ತಿಲ್ಲ. ನಾನು ಈ ಲೋಕದಿಂದ ಹೋಗಿಬಿಟ್ಟರೆ ಕುಸುಮಳಿಗಾರು ದಿಕ್ಕು? ಹಾಗೇನಾದರೂ ಅನರ್ಥವಾದರೆ ನೀನವಳನ್ನು ನೋಡಿಕೊಳ್ಳ ಬೇಕೆಂಬುದೇ ನಿನಗೆ ಹೇಳಬೇಕಾದ ಮುಖ್ಯವಾದ ಮಾತು. ಅವಳ

ಹೆಸರಲ್ಲಿ ಸ್ವಲ್ಪ ಆಸ್ತಿ ಇದೆ. ಅವಳು ಮನೆತನಸ್ಥಳಾಗುವ ವರೆಗೆ ನೀನು ನೋಡಿಕೊಂಡರೆ, ಮುಂದೆ ಎಲ್ಲವೂ ಸರಿಹೋಗುವುದು. ನನ್ನ ನಂತರ ಅವಳಿಗೆ ಆಪ್ತರಾರು ಹೇಳು? ಅಹುದಲ್ಲೋ? ನಿನ್ನನ್ನು ಕರೆದು ಹೇಳದಿದ್ದರೆ ಮತ್ತಾರಿಗೆ ಹೇಳಲಿ ನೀನೇ ಹೇಳು" ಎಂದು ದೈನ್ಯದಿಂದ ಗೋಪಾಲನ ಕಡೆ ನೋಡಿದ. ಗೋಪಾಲ ಥಟ್ಟನೆ ಕುಳಿತ ಸ್ಥಳದಿಂದೆದ್ದು ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಹೆಜ್ಜೆ ಹಾಕಿದ. ಮನಸ್ಸಿನಲ್ಲೇನೋ ಅಣ್ಣನ ಮಾತಿನಂತೆ ನಡೆಯಬೇಕೆಂಬ ನಿಶ್ಚಯ ಮಾಡಿದರೂ ಹೊರಗೆ ಮಾತ್ರ ಅದನ್ನು ತೋರಗೊಡಬಾರದೆಂದು ನೆನೆದು, ಮೊದಲು ಅಣ್ಣನ ಹಿಂದಿನ ವರ್ತನೆಗೆ ಚೆನ್ನಾಗಿ ಥಳಿಸಿ ಬಿಡಬೇಕೆಂದು ನಿಶ್ಚಯಿಸಿದ. ದೊಡ್ಡ ಉಪನ್ಯಾಸದಿಂದ ಅವನದೆಲ್ಲವನ್ನೂ ಹೊರಗೆಡಹಬೇಕೆಂದು "ನಿನ್ನ ಮಗಳ ಜೀವನವು ಚೆನ್ನಾಗಿರಬೇಕಾದರೆ, ನಾನೇನು ಮಾಡುವುದಿದೆ? ನಿನ್ನ ನಾದಿನಿ ರಮಾಳನ್ನು ಕೇಳು" ಎಂದು ಚುಚ್ಚು ಮಾತನಾಡಿದನು. ರಮಾದೇವಿಯು ಗೋಪಾಲನಿದ್ದ ಊರಿನಲ್ಲಿ ವೇಶ್ಯ ವೃತ್ತಿಯನ್ನು ಮಾಡುತ್ತಲಿದ್ದಳು. ಕುಸುಮಳ ತಾಯಿಯ ತಂಗಿ. "ರಮಾಳ ವಶಕ್ಕೆ ಕೊಡಬೇಕೆಂದು ಮನಸ್ಸು ಮಾಡಿದ್ದರೆ ನಿನಗೇತಕ್ಕೆ ಬರೆಯುತ್ತಲಿದ್ದೆ?" ಅಲ್ಲಿಗೆ ಶ್ರೀಧರನ ತಲೆ ಸ್ವಲ್ಪ ಕಾದುಹೋಗಿತ್ತು.

"ನನ್ನನ್ನು ವಿನಾಕಾರಣ ಬರಹೇಳಿ ನನ್ನ ಕೆಲಸವೆಲ್ಲವನ್ನು ಹಾಳು ಮಾಡಿದೆ. ಸುಗ್ಗಿಯ ಕಾಲ; ರೈತರು ಬಂದಿರುವರು. ಈಗ ಸ್ವಲ್ಪ ಸಿದ್ಧತೆ ಮಾಡಿಕೊಳ್ಳದಿದ್ದರೆ, ಮುಂದೆ ಬೆಳೆ ಕೈಸೇರುವುದೇ ಕಷ್ಟ. ಇದೇನಂತಹ ಅವಸರದ ವಿಷಯ? ಅದರೂ ನಾನು ಇಂಥಾ ನೀಚ ಕೆಲಸವನ್ನು ಮಾಡುವೆನೆಂದು ನೀನು ತಿಳಿದುದಾದರೂ ಹೇಗೆ?"

"ಮೊದಲಿದ್ದ ಸ್ಥಿತಿಯಲ್ಲಿದ್ದರೆ ನೀನು ಒಪ್ಪುವುದಿಲ್ಲವೆಂದು ಖಂಡಿತ ತಿಳಿದಿತ್ತು. ಹನ್ನೆರಡು ವರುಷ ನಂತರ ಸ್ವಲ್ಪಾದರೂ ದಯ ತೋರಲು ನಿನ್ನ ಮನಸ್ಸು ತುಸು ಬದಲಾಗಿರಬಹುದೆಂದು ನಾನು ನೆನೆದೆ. ಹಾಗೆ ನೆನೆದುದು ನನ್ನ ತಪ್ಪು."

ಈ ಮಾತಿಗೆ ಗೋಪಾಲನ ಕೋಪ ಮೇರೆ ಮೀರಿತು. ಕಣ್ಣು ಕೆಂಪಗೆ ಮಾಡಿ, ಅವಸರದಿಂದ ಹೆಜ್ಜೆ ಹಾಕುತ್ತ, 'ನಿನ್ನ ನೋಟದಲ್ಲಿ

ಮನುಷ್ಯನು ಬದಲಾಯಿಸುವುದೆಂದರೆ ನೀಚ ಕೆಲಸಗಳಿಗೊಪ್ಪಿಕೊಳ್ಳುವುದೆಂದ ಹಾಗಾಯಿತು. ಒಳ್ಳೇ ಮಾತು! ಇನ್ನಷ್ಟು ಜನ್ಮಗಳೆತ್ತಿ ಬಂದರೂ ನಿನ್ನಂತೆ ನಡೆದು ಕೊಳ್ಳಲು ನನ್ನಿಂದಾಗದು. ನಾಲ್ಕು ಮಂದಿ ತುಳಿಯುವ ಹಾದಿಯಲ್ಲಿ ಹೋಗುವುದು, ನನ್ನ ಕೆಲಸ. ಅಡ್ಡದಾರಿ ಹಿಡಿದು ......ಸಮಾಜವನ್ನು ಎದುರಿಸುವುದು .......ಹೂಂ, ಹೂ ಅದು ನನ್ನಿಂದಾಗದ ಮಾತು. ನಿನ್ನ ಮಗಳಿಗೆ ಯಾರಾದರೂ ಸಹಾಯಕರು ಬೇಕೆಂದು ನಿನ್ನ ಅಭಿಮತ. ಯಾಕೆ ಬೇಕು? ನೀನು ಈಗ ಅಂಥವಳನ್ನು ಮದುವೆಯಾದುದರಿಂದ ಏನು ಸುಖ ಕಾಣುತ್ತಲಿರುವಿ? ಸೂಳೆ ವೃತ್ತಿಯಲ್ಲಿರುವ ಮನೆಯಲ್ಲಿಯ ಹೆಣ್ಣುಗಳನ್ನು ತಂದು ಮದುವೆಮಾಡಿಕೊಂಡು, ಕುಲೀನರೆಂದೆನಿಸಿಕೊಳ್ಳ ಬೇಕಾದರೆ, ನಮ್ಮಂಥ ಸನಾತನಿಗಳು, ಸಂಸಾರಿಗಳು ಮಕ್ಕಳನ್ನು ಹಡೆದು ಮನೆತನಗಳನ್ನು ಹೇಗೆ ನೆಲೆಸುವುದು? ಧರ್ಮದ ಗತಿಯೇನು? ನಮಗೇನು ಹುಚ್ಚು ಹಿಡಿದೆಯೆ ಹೀಗೆ ಧರ್ಮ, ಧರ್ಮ ಎಂದು ಬಡಾಯಿ ಕೊಚ್ಚಿಕೊಳ್ಳುವುದೇಕೆ? ಸುಂದರ ಸ್ತ್ರೀಯನ್ನಾರಿಸಿ ನಾವೂ ನಿನ್ನಂತೆ ಇರಲಾರೆವೇನು? ಸೂಳೆಯ ಜಾತಿಯಲ್ಲಿ ಹುಟ್ಟಿದವಳನ್ನು ದೊಡ್ಡವಳಾಗಿ ಬಳೆದ ಹೆಣ್ಣನ್ನು, ನಾಲ್ಕು ಮಂದಿಯಲ್ಲಿ ಪರೆಬಿಚ್ಚಿದ ಹಾವಿನಂತೆ ತಿರುಗುವವಳನ್ನು, ನಾನೇನೆಂದು ನನ್ನ ಮನೆಯಲ್ಲಿಟ್ಟು ಕೊಳ್ಳಲಿ? ಹೇಗೆ ಮನೆಯಲ್ಲಿ ಅವಳಿರುವುದು? ಇಂಥ ಬೆಳೆದ ಹುಡುಗಿಯನ್ನು ಮನೆಯಲ್ಲಿಟ್ಟುಕೊಳ್ಳುವ ಮನಸ್ಸಿದ್ದರೆ, ನಾನೇಕೆ ಮನೆ ಮಾರುಗಳನ್ನು ಮಾರಿಯಾದರೂ ನನ್ನ ಇಬ್ಬರು ಹುಡುಗಿಯರ ಮದುವೆಮಾಡಿ ಭಿಕಾರಿಯಾಗುತ್ತಿದ್ದೆ? ಸಮಾಜ ಸಮ್ಮತಿಸುವುದೆ? ನನ್ನ ರೀತಿನೀತಿಗಳು ಬದಲಾಯಿಸಿರಬಹುದೆಂದು ನೀನು ಊಹಿಸಿದೆಯಲ್ಲವೆ? ಹರೆಯದಲ್ಲಿ ತಿಳಿಯದೇ ನೀನು ಮಾಡಿದ ಅನೀತಿ ಕಾರ್ಯದ ತಪ್ಪು ಈಗಲಾದರೂ ತಿಳಿದಿರಬಹುದು ಎಂದು ನಾನು ನೆನೆದೆ. ನೀನು ಧರ್ಮ ಬುದ್ಧಿಯವನಾಗಿರುವೆಯೆಂದು ತಿಳಿದುದು ಮೋಸವಾಯಿತು. ಕುಲ ವಿಲ್ಲದೆ, ಆಚಾರವಿಲ್ಲದೆ, ಸಂಸ್ಕಾರವಿಲ್ಲದೆ ಬೆಳದ ಹುಡುಗಿಯನ್ನು ನನ್ನ ಮನೆಯಲ್ಲಿರಿಸಿ ಕೊಳ್ಳಬೇಕೆ? ನಾಲ್ಕು ಮಂದಿ ಹೊಗಳುವ ಮನಸ್ಸಿಗೊಪ್ಪುವ ಕಾರ್ಯ ಮಾಡಿದರೆ ಸಮಾಜದಲ್ಲಿ ಇದ್ದು ಬಾಳಬಹುದು.

ಇದಕ್ಕೊಪ್ಪಿಕೊಂಡು ನಾನು ಸಮಾಜಭ್ರಷ್ಟನಾಗಬೇಕೇನು? ಸಮಾಜ ವನ್ನು ಧಿಕ್ಕಾರಮಾಡಿ ಜೀವಿಸಲು ನನ್ನಿಂದಾಗದು. ಹಣವಿದೆಯೆಂದು ನಿನಗೆ ಹೆಮ್ಮೆ ಇರಬಹುದು. ಆದರೆ ಗುಣವಿಲ್ಲದೆ ಸಂಪಾದಿಸಿದ ಹಣ ಕಸವೆಂಬುದು ನೀನು ತಿಳಿಯಬೇಕು. ಇಂಥಾ ಕಲಿಯುಗವೆಂದರೂ ಸಮಾಜದಲ್ಲಿ ಇಂಥ ಅನೀತಿ ಕೆಲಸಗಳು ನಡೆಯಲಾರವು. ನಾನು ಅಪಕೀರ್ತಿಯ ಪಾಲಾಗಲಾರೆ.'' ಎಂದು ಒಂದೇ ಧೋರಣೆಯಲ್ಲಿ ಆಡಿದ ಈ ಚುಚ್ಚು ಮಾತುಗಳು ಶ್ರೀಧರನ ಮನಸ್ಸನ್ನೂ ಹೆಚ್ಚು ನೋಯಿಸಿ ದವು. ಮೊದಲಿನಿಂದಲೇ ಇವನೆಂದರೆ ಗಾಬರಿಗೊಂಡ ಶ್ರೀಧರನು ಇವನ ಬೈಗಳನ್ನು ಕೇಳಿ ನಿಸ್ತೇಜನಾದ. ಮಾತು ಬೆಳೆದಂತೆಲ್ಲ ಅವನಲ್ಲಿಯ ಶಕ್ತಿ ಕುಂದ ಹತ್ತಿತು. ಶರೀರವೆಲ್ಲವೂ ನಿರ್ಬಲತೆಯಿಂದ ನಡುಗಿತು. ಸಮಾಜವೆಂದು ಹೊಗಳಿ ಅದರ ಹಿಂದೆ ನಿಂತು ಯಾವ ಕಾರಣವೂ ಇಲ್ಲದೆ ನಿಷ್ಕಳಂಕವಾದ ತನ್ನ ವರ್ತನೆಯಲ್ಲಿ ತಪ್ಪು ಮಾತ್ರ ಕಂಡು ಹಿಡಿದು ಖಂಡಿಸಿ ಮಾತನಾಡಲು ಅವನಲ್ಲಿದ್ದ ಧೈರ್ಯ ಇವನನ್ನು ಹುಚ್ಚೆಬ್ಬಿಸಿತು. ಅಸಹನೆಯಿಂದ ಅವನನ್ನು ಮನೆಬಿಟ್ಟು ಹೋಗೆಂದು ಹೇಳಬೇಕೆಂಬ ಉದ್ದೇಶದಿಂದ ಸ್ವಲ್ಪ ಎದ್ದು ನಿಂತನು. ಮರುಕ್ಷಣ ದಲ್ಲಿಯೇ ಎದೆಯ ನೋವು ಹೆಚ್ಚಾದುದರಿಂದ ಎರಡೂ ಕೈಗಳಿಂದ ಎದೆ ಯನ್ನು ಒತ್ತಿಹಿಡಿದು ಮಂಚದ ಮೇಲೆ ಕುಸಿದು ಬಿದ್ದನು. ಮುಖ ಕಪ್ಪೇರಿತ್ತು. ತಲೆ ಪಕ್ಕಕ್ಕುರುಳಿ, ಬಾಯಿಂದ ಬುರುಗು ಬರುತಿತ್ತು.

ಹಾಗೆಯೇ ನೋಡುತ್ತ ಗೋಪಾಲನು ಹತ್ತಿರ ಬಂದು ನೋಡಿದ. ಶ್ರೀಧರನ ಉಸಿರಾಟ ನಿಂತು ಹೋಗಿತ್ತು. ಒಂದೇ ಕ್ಷಣದಲ್ಲಿ ಇಂಥಾ ವಿಪತ್ತು ಬಂದುದು ಆಶ್ಚರ್ಯವೆನಿಸಿತು. "ಅಣ್ಣಾ, ಅಣ್ಣಾ" ಎಂದು ಕೂಗಿದ. ಹೆಣವೆಲ್ಲಿಯಾದರೂ ಮಾತನಾಡುವುದೆ?

೬

ಎಲ್ಲರ ಊಟವು ಮುಗಿಯಿತು. ಹೊತ್ತಾದರೂ ತಂದೆಯುವರೇಕೆ ಬರಲಿಲ್ಲವೆಂದು ಕುಸುಮಳು ಯೋಚಿಸಿದಳು. ಮನೆಗೆ ಹೋಗಿ ತಂದೆಯ ಸ್ಥಿತಿಯನ್ನು ತಿಳಿದು ಬರುತ್ತೇನೆ ಎಂದು ಕಾಂತರಾಯನಿಗೆ ಹೇಳಿ ಮನೆಗೆ ಹೊರಡುವುದರಲ್ಲಿದ್ದಳು. ತಮ್ಮ ಮನೆಯ ಆಳು ಧಾವಿಸಿ ಓಡಿ ಬರುವುದನ್ನು ಕಂಡು ನಿಂತು ಬಿಟ್ಟಳು. ಬಂದ ಆಳು "ರಾಯರು ಮೂರ್ಛೆ ಬಂದು ಬಿದ್ದು ಬಿಟ್ಟಿದ್ದಾರೆ ಮಾತೇ ಇಲ್ಲ" ಎಂದು ಅವಸರ ದಿಂದ ಗಾಬರಿಯ ನೋಟದಿಂದ ಹೇಳಿದ ಮಾತು ಕೇಳಿ ಕುಸುಮಳು ಸುಮ್ಮನೇ ನಿಂತು ಬಿಟ್ಟಳು. ಸ್ವಲ್ಪ ಚೇತರಿಸಿಕೊಂಡ ನಂತರ ಕಾಂತ ರಾಯನು ಪ್ರಭಾಕರನೊಡನೆ ಇವಳನ್ನು ಮನೆಯ ವರೆಗೆ ಬಿಟ್ಟು ಬರಲು ಹೇಳಿದನು. ಅವಸರವೆನಿಸಿದರೆ, ಅಲ್ಲೇ ತಡೆದು ನಿಂತು ಬರಬಹು ದೆಂದೂ ಸೂಚಿಸಿದನು.

ಕುಸುಮಳು ಮನೆಗೆ ಬರುವ ಹೊತ್ತಿಗೆ ಮನೆ ತುಂಬಾ ಜನರು ನೆರೆದಿದ್ದರು. ಡಾಕ್ಟರನು ಬರುವ ಹೊತ್ತಿಗೆ ಆವನ ಮೈ ತಣ್ಣಗಾಗಿದ್ದುದ ರಿಂದ ಬಂದ ಹಾದಿಗೆ ಸುಂಕವಿಲ್ಲೆಂದು ಹೇಳಿ ಆವನು ಹೋಗಿದ್ದನು. ರಾಯನು ಮೃತನಾದನೆಂಬ ಸುದ್ದಿ ಕೇಳಿ ಜನರು ಸೇರುತ್ತಲಿದ್ದರು. ಈ ನಾಟಕದಲ್ಲಿಯ ಮುಖ್ಯ ಪಾತ್ರನಂತೆ ಗೋಪಾಲನೆಲ್ಲ ಏರ್ಪಾಟು ಮಾಡಿದ. ಉತ್ತರ ಕ್ರಿಯೆಗಳಾಗಬೇಕಾಯಿತು. ಅವರಾರೆಂಬುವುದು ತಿಳಿಯದಲೇ ಮನೆಯ ಪೆಟ್ಟಿಗೆಯ ಕೀಲಿಕೈ ಕುಸುಮ ಕೊಟ್ಟು ಬಿಟ್ಟಳು. ತಾನೇನು ಮಾಡುತ್ತಿರುವೆನೆಂಬುದರ ಅರಿವೇ ಅವಳಿಗಿರಲಿಲ್ಲ.

ಸ್ವಲ್ಪ ದೂರ ನಿಂತು ಪ್ರಭಾಕರನು ಇದೆಲ್ಲವನ್ನೂ ನೋಡುತ್ತಾ ನಿಂತಿದ್ದ. ಕುಸುಮಳು ಉಕ್ಕಿ ಬರುವ ದುಃಖವನ್ನು ಧೈರ್ಯದಿಂದ ನುಂಗಿಕೊಳ್ಳುವುದನ್ನು ದೂರದಿಂದಲೇ ಕಂಡು ಹಿಡಿದ. ಯಾರೂ ಅಳ ದಿದ್ದ ಆ ಸಂದಣಿಯಲ್ಲಿ ತಾನೊಬ್ಬಳೇ ಅಳುವುದು ರೂಢಿಯಲ್ಲವೆಂತಲೂ ಧೈರ್ಯದಿಂದ ಎದುರಿಸುವುದೇ ಸದ್ಯದ ಕರ್ತವ್ಯವೆಂದೂ ತಿಳಿದು ಸುಮ್ಮ ನಿರಬೇಕಾಯಿತು.

ಯಾವ ಮಂತ್ರತಂತ್ರ, ಸ್ನಾನವಿಲ್ಲದಲೇ ಶವವನ್ನು ಸ್ಮಶಾನಕ್ಕೆ ಸೇರಿಸಿದುದಾಯಿತು. ಗೋಪಾಲರಾಯನು ಶವದ ಹಿಂದೆ ಹೋದ ಕೂಡಲೇ ಕುಸುಮಳು ಪಕ್ಕದ ಕೋಣೆಗೆ ಹೋದಳು. ಹಿಂದೆ ಪ್ರಭಾಕರನೂ ಹೋದ. ಅಲ್ಲಿ ನಿರಾತಂಕವಾಗಿ ಅತ್ತು ಬಿಟ್ಟಳು. ಹತ್ತಿರವೇ ಕಿಟಿಕಿಯ ಮೂಲಕ ಪ್ರಭಾಕರನು ಆಕಾಶವನ್ನೇ ನೋಡುತ್ತಲಿದ್ದ. ಅವನು ಏನೂ ತೋಚದ ಸ್ಥಿತಿಯಲ್ಲಿದ್ದನು. ಅವನು ಎಚ್ಚತ್ತು ಗಡಿಯಾರದ ಕಡೆ ನೋಡಲು ಗಂಟೆ ನಾಲ್ಕು ಹೊಡೆದಿತ್ತು.

ಅಲ್ಲಿಗೆ ಕುಸುಮಳು ಸುಮ್ಮನಾಗಿದ್ದಳು. ದುಃಖವೆಲ್ಲವನ್ನು ಮರೆಯಲು ಪ್ರಯತ್ನ ಪಟ್ಟಂತೆ ಕಾಣುತಿತ್ತು. ಇನ್ನು ಮುಂದೆ ತನ್ನಿಂದ ಸಹಾಯವಾಗುವುದೇನಾದರೂ ಇದೆಯೇ ಎಂದು ಕೇಳಬೇಕೆಂದೆನಿಸಿದ. ಅವಳನ್ನು ಹೇಗೆ ಕೇಳಬೇಕೆಂಬುದು ಹೊಳೆಯಲಿಲ್ಲ. ಹತ್ತಿರದಲ್ಲಿದ್ದ ಕುರ್ಚಿಯೊಂದರಲ್ಲಿ ಅವಳ ಸಮೀಪವಾಗಿ ಕುಳಿತು "ಈಗಲೇ ಕಾಂತನೂ ಬರಬಹುದು. ಅವನು ಬಂದ ಮೇಲೆ ನಮ್ಮಿಬ್ಬರಿಂದ ಯಾವ ಸಹಾಯವು ಬೇಕಾದರೂ...." ಎಂದು ಹೇಳುವಾಗಲೇ ಸುಮ್ಮನಾದನು.

"ನನಗಿನ್ನಾರೂ ದಿಕ್ಕು? ಹೊರಗಿನವರಲ್ಲಿ ತಿಳಿದ ಮಿತ್ರರೆಂದರೆ ನೀವಿಬ್ಬರಲ್ಲವೆ? ನಾನು ದಿಕ್ಕಿಲ್ಲದವಳಾಗಿರುವೆನು. ದೇವರು ನಿಮ್ಮ ಪರಿಚಯವನ್ನಾದರೂ ಮಾಡಿದನಲ್ಲ" ಎಂದು ಮತ್ತೆ ಅಳತೊಡಗಿದಳು.

ಆ ವೇಳೆಗೆ ಸರಿಯಾಗಿ ಗೋಪಾಲರಾಯನು ಅವಸರದಿಂದ ಒಳಗೆ ಬಂದವನೇ ಇವರಿಬ್ಬರನ್ನು ದಿಟ್ಟಿಸಿ ನೋಡುತ್ತ "ನಾನೇ ಶ್ರೀಧರನ ತಮ್ಮ ಗೋಪಾಲ. ನೀವು ಇವಳ ಸ್ನೇಹಿತರೇ" ಎಂದು ಕೇಳಿದ.

"ಅಷ್ಟೇನು ನಮ್ಮ ಪರಿಚಯ ಬೆಳೆದಿಲ್ಲ. ಸ್ವಲ್ಪ ಇತ್ತ ಕಡೆ ದಯಮಾಡಿಸಿ" ಎಂದವನನ್ನು ಹೊರಗೆ ಕರೆದು ಕುಸುಮಳ ಮುಂದಿನ ವ್ಯವಸ್ಥೆ ಏನೆಂದು ಕೇಳಿದ ಪ್ರಭಾಕರನು.

"ಆಗಲೇ ಎಲ್ಲವೂ ನಿರ್ಣಯಿಸಲ್ಪಟ್ಟಿದೆ. ಈ ಮನೆ ಬಾಡಿಗೆಗೆ ಕೊಟ್ಟುಬಿಡುತ್ತೇನೆ. ಹುಡುಗಿ ನಮ್ಮ ಮನೆಯಲ್ಲಿ ನನ್ನಿತರ ಮಕ್ಕಳೊಂದಿಗೆ ಇದ್ದುಬಿಡುವಳು. ನಿಮಗಿನ್ನೇನಾದರೂ ಬೇರೆ ಉಪಾಯ ತೋರಿದಲ್ಲಿ ಸೂಚಿಸಬಹುದು" ಎಂದು ಸಭ್ಯಗೃಹಸ್ಥನಂತೆ ಗೋಪಾಲ

ರಾಯನು ಸರಳ ಮಾತಿನಲ್ಲಿ ಹೇಳಿದ. ಈ ತನ್ನ ಸೂಚನೆಗೆ ಆತಂಕ ವೇನಾದರೂ ಬರಬಹುದೆಂಬ ಭಯವು ಅವನಿಗುಂಟಾಗಿತ್ತೆಂದು ಅವನ ಮಾತಿನ ಅವಸರದ ಸರಣಿ ಹೇಳುತಿತ್ತು.

ಛೇ, ಛೆ, ಇದೇ ಉತ್ತಮ ಯೋಚನೆ. ನಿಮ್ಮ ಸೂಚನೆಯಂತೆ ನಡೆದು ಕೊಂಡರಾಯಿತು.'' ಎಂದನು ಪ್ರಭಾಕರನು. ಮತ್ತೆ ಸ್ವಲ್ಪ ರಹಸ್ಯವಾಗಿ ಇದರ ಬಗ್ಗೆ ಅಭಿಪ್ರಾಯ ಕೇಳಿದ್ದರೆ ಒಳಿತಾಗುತಿತ್ತೇನೋ ಎಂಬ ಯೋಚನೆ ಬಂತು. ಆದರೆ ಪ್ರಭಾಕರನು ಸುಮ್ಮನಾಗಿ "ತಾವು ಯಾವಾಗ ಬಂದದ್ದು?" ಎಂದು ಕೇಳಿದ.

"ನಾನು ಇವತ್ತು ಒಂಭತ್ತರ ಗಾಡಿಗೆ ಬಂದೆ. ನನಗೆ ಶ್ರೀಧರನು ಹೇಳಿ ಕಳಿಸಿದ್ದ. ಕಾಗದವೂ ಬರೆದಿದ್ದ. ಇಲ್ಲಿದೆ ನೋಡಿ ಅವನ ಕಾಗದ. ಮನೆಯ ವಿಷಯ ಮಾತು ಸರಳ ಶಾಂತರೀತಿಯಲ್ಲಿ ನಡೆದಿತ್ತು. ಮಾತನಾಡುತ್ತ ಮಧ್ಯದಲ್ಲೇ ಹಾಸಿಗೆ ಮೇಲೆ ಕುಸಿದು ಬಿದ್ದುಬಿಟ್ಟ, ಮುಖ ಕಪ್ಪಿಟ್ಟು ಹೋಯಿತು. ಪ್ರಾಣ ಹೊರಟೇಬಿಟ್ಟಿತು. Heart failure ಅಂತ ಕಾಣುತ್ತದೆ. ನಾನಿಂಥ ಸಾವನ್ನು ಕಂಡಿದ್ದೇ ಇಲ್ಲರೀಂದ್ರೆ" ಎಂದು ಪುರಾಣ ಹೇಳಿದ.

ಪ್ರಭಾಕರನಿಗೆ ಈಗ ಸ್ವಲ್ಪ ಸಮಾಧಾನವೆನಿಸಿತು. ಕುಸುಮಳಿಗೆ ಸದ್ಯ ಒಂದು ಹಾದಿ ಹತ್ತಿತು. ದೂರದಿಂದಲೇ ವಿಚಾರಿಸಿ ಮುಂದಿನ ಮಾರ್ಗವನ್ನು ನಿರ್ಣಯಿಸಬಹುದಲ್ಲವೆಂದು ಯೋಚಿಸಿ, ಕುಸುಮಳ ಹತ್ತಿರ ಬಂದು "ನಿಮ್ಮ ಚಿಕ್ಕಪ್ಪನವರು ನಿಮ್ಮನ್ನು ತಮ್ಮ ಮನೆಗೆ ಕರೆದುಕೊಂಡು ಹೋಗುವ ನಿರ್ಧಾರ ಮಾಡಿದ್ದಾರೆ. ಇದು ನಿಮಗೆ ಒಪ್ಪಿಗೆ ತಾನೆ?''

ಯಾವುದೋ ಗುಂಗಿನಲ್ಲಿದ್ದಂತೆ ಕಾಣುತ್ತಲಿದ್ದ ಕುಸುಮಳಿಂದ "ಅಹುದು" ಎಂಬ ಸಮ್ಮತಿಯ ಸೂಚನೆ ಹೊರಟಿತು.

''ಇನ್ನು ನನ್ನದೊಂದು ಸಣ್ಣ ವಿನಂತಿ ಇದೆ." ಎಂದು ಹೇಳಿದ ಪ್ರಭಾಕರನ ಮಾತುಗಳಿಗೆ ಕುಸುಮಳು ತಗ್ಗಿಸಿದ ಮುಖವನ್ನು ಮೇಲಕ್ಕೆತ್ತಿ ಅವನ ಕಡೆ ನೋಡಿದಳು.

"ನೀವು ನನ್ನನ್ನು ನಿಮ್ಮ ಆಪ್ತ ಮಿತ್ರರಲ್ಲೊಬ್ಬನನ್ನಾಗಿ ತಿಳಿದು ಕೊಂಡು ನಿಮ್ಮ ಆಂತರಂಗಿಕ ವಿಷಯಗಳ ಬಗ್ಗೆ ಸಲಹೆಗಳನ್ನು ಹೇಳು ವಷ್ಟು ಸಲುಗೆಯನ್ನಿತ್ತುದಕ್ಕೆ ಪರಮ ಸಂತೋಷ. ನಾನೋರ್ವ ವಿಚಿತ್ರ ವ್ಯಕ್ತಿ. ಯಾರೂ ಸುಲಭವಾಗಿ ನನ್ನನ್ನು ಮಿತ್ರನನ್ನಾಗಿ ಮಾಡಿ ಕೊಳ್ಳುವುದಿಲ್ಲ. ನಾನಾದರೂ ಹಾಗೆಯೆ. ನನಗಿರುವ ಪರಮ ಆಪ್ತ ಗೆಳೆಯನೆಂದರೆ ಕಾಂತನೊಬ್ಬನೇ. ನನ್ನ ಅಭಿರುಚಿಗಳಿಗೆ ಸರಿಯಾಗಿ ಹೊಂದಿಕೊಂಡು ಹೋಗುವ ಮಿತ್ರರು ವಿರಳ. ಕೇವಲ ಸ್ವಲ್ಪೇ ಸಮಯದಲ್ಲಿ ನಿಮ್ಮ ವಿಶ್ವಾಸಕ್ಕೆ ಪಾತ್ರನಾಗಲು ಅನುವು ದೊರಕಿಸಿ ಕೊಟ್ಟಿರಿ. ನಿಮ್ಮ ಸರಳ ಹೃದಯ, ಅಂತಃಕರಣದ ವರ್ತನೆಯನ್ನು ನಾನೆಂದಿಗೂ ಮರೆಯಲಾರೆ. ಇಷ್ಟು ಹೇಳಿಕೊಳ್ಳುವ ಸಮಯವಲ್ಲ ವಿದು. ಆದರೂ ನಿರ್ವಾಹವಿಲ್ಲ. ನಾವಿಬ್ಬರೂ ಅಗಲುವುದರ ಮುನ್ನ ನನ್ನ ಮನಸ್ಸು ಬಿಚ್ಚಿ ಮಾತನಾಡುವುದು ಒಳಿತಲ್ಲವೆ? ನಿಮಗಾವ ರೀತಿಯಲ್ಲಿ ನನ್ನಿಂದ ನೆರವು ಬೇಕಾದರೂ ನಿಸ್ಸಂಕೋಚವಾಗಿ ಕೇಳ ಬೇಕೆಂದು ನನ್ನ ಬೇಡಿಕೆ. ನಾನು, ಕಾಂತನು ಜೀವಂತಿರಿರುವಾಗ ನೀವು ದಿಕ್ಕಿಲ್ಲದವರಾಗಲಾರಿರಿ. ಇದು ಮಾತ್ರ ನೆನಪಿನಲ್ಲಿಡಿರಿ. ಇಂಥ ಸಮಯ ಮುಂದೆ ದೊರೆಯಲಾರದು. ಆದುದರಿಂದ ಹೀಗೆ ಹೇಳ ಬೇಕಾಯಿತು" ಎಂದು ಹೇಳಿ ಪ್ರಭಾಕರನು ಸುಮ್ಮನಾದ.

ಎತ್ತಿದ ತಲೆಯನ್ನು ಮಾತಿನ ನಡುವೆ ಬಾಗಿಸಿದ ಕುಸುಮಳು ಸಣ್ಣ ಧ್ವನಿಯಲ್ಲಿ "ನಿಮ್ಮ ಉಪಕಾರ ಮರೆಯಲಾರೆ; ನಮಸ್ಕಾರ" ಎಂದು ಹೇಳಿ ಸುಮ್ಮನಾದಳು. ಪ್ರಭಾಕರನು ತನ್ನ ಬಿಡಾರವನ್ನು ಸೇರುವ ಹೊತ್ತಿಗೆ ಸಂಜೆ ಆರು ಹೊಡೆಯಿತು. ಅಂದಿನ ಕಾರ್ಯಕ್ರಮದಲ್ಲಿ ಅವನದೇನೂ ಇರಲಿಲ್ಲವಾದುದರಿಂದ ಇಷ್ಟು ತಡವಾದುದರಿಂದ ಅನಾನು ಕೂಲವೇನೂ ಆಗಲಿಲ್ಲ.

ಸ್ವಲ್ಪ ಹೊತ್ತಿನಲ್ಲಿ ಕಾಂತರಾಯನು ಬಂದು ಸೇರಿದ. ಪ್ರಭಾಕರ ನೊಬ್ಬನೇ ಇರುವುದರಿಂದ ಆಶ್ಚರ್ಯ ಹೊಂದಿ, "ಎಲ್ಲ ವಿಷಯದ ವಿವರ ನನಗೆ ಶಾಲೆಯಲ್ಲೆ ತಿಳಿಯಿತು. ನಾನು ಸಭೆಗೆ ಹೋಗಲಿಲ್ಲ. ಕುಸುಮ ಳಿಗೆಂತಹ ವಿಪತ್ತು ಬಂದೊದಗಿತು ಪಾಪ. ಅವಳು ನಾಳೆ ಬರಲಾರಳು.

ಬುಚ್ಚಮ್ಮನ ಪಾತ್ರಕ್ಕೆ ಇನ್ನೊಬ್ಬರನ್ನಾರಿಸಿ ಪಾಠ ಹೇಳಿ ಬರುವ ಹೊತ್ತಿಗೆ ಎಂಟು ಹೊಡೆಯಿತಪ್ಪಾ ಕುಸುಮಳ ಗತಿ ಏನು ಮುಂದೆ?" ಎಂದು ಕೇಳಿದ.

"ಅವಳ ಚಿಕ್ಕಪ್ಪನು ಬಂದಿದ್ದಾನೆ."

"ಅದು ಯಾವಾಗ? ಬಂದುಬಿಟ್ಟನೇನು?"

"ಅವನು ಬರುವುದು, ಶ್ರೀಧರನು ಸಾಯುವುದು ಎರಡೂ ಸಮವಾಯಿತು. ಮಹಾರಾಯ ಕಾಲಿಟ್ಟಕೂಡಲೇ ಅಣ್ಣನ ಪ್ರಾಣ ನುಂಗಿದ."

"ಇರಲಿ, ನಾನೂ ಕುಸುಮಳನ್ನು ಕಂಡು ಬರುತ್ತೇನೆ. ಇಲ್ಲದಿದ್ದರೆ ನನ್ನ ಮನಸ್ಸಿಗೆ ನೆಮ್ಮದಿ ಎನಿಸುವುದಿಲ್ಲ. ಜೇಗ ಬಂದುಬಿಡುತ್ತೇನೆ" ಎಂದು ಮಾತು ಮುಗಿಯಿಸಿ ಕಾಂತರಾಯನು ಕುಸುಮಳ ಮನೆಗೆ ಬಂದ.

ಕುಸುಮಳನ್ನು ಕಂಡು "ಏನು ನಿಮ್ಮ ದುರ್ದೈವ?" ಎಂದು ಹೇಳಿ ಸುಮ್ಮನಾದ.

"ನನಗಾವುದೂ ತೋಚದಂತಾಗಿದೆ. ಎಲ್ಲವೂ ದೇವರ ನಿಯಮದಂತೆ ನಡೆಯುತ್ತಿದೆ."

"ನಿಮ್ಮನ್ನು ಚಿಕ್ಕಪ್ಪನವರು ತಮ್ಮ ಮನೆಗೆ ಕರೆದುಕೊಂಡು ಹೋಗುವರಂತೆ? ಇದಕ್ಕಿಂತಲೂ ಜೇರೆ ಅನುಕೂಲವಾದ ಉಪಾಯವಿಲ್ಲವೆ?"

"ಇನ್ನೇನಿದೆ ನನಗಾವುದೂ ತಿಳಿಯದು"

"ನಾನೂ ಸುಮ್ಮನಿರಬೇಕಾಗಿದೆ. ಜೇರೆ ಯಾವ ಮಾರ್ಗವೂ ಕಂಡುಬರುವಂತಿಲ್ಲ. ಇಂಥಾ ಸಂದರ್ಭಗಳಲ್ಲಿ ಸ್ವತಂತ್ರರಾಗಿ ನಡೆದುಕೊಂಡು ನಮ್ಮ ಮನಸ್ಸಿನಂತೆ ವರ್ತಿಸುವಷ್ಟು ಧೈರ್ಯ ನಮ್ಮಲ್ಲಿಲ್ಲವಲ್ಲವೆಂದು ಯೋಚಿಸುತ್ತೇನೆ. ನಾವೆಷ್ಟು ಓದಿದರೇನು ಪ್ರಯೋಜನ?' ಎಂದು ಹೇಳಿ ಕಾಂತನು ಸುಮ್ಮನಾದನು. ಕುಸುಮಳ ಅನುಮತಿ ಪಡೆದು, ತನ್ನ ಮನೆಗೆ ಬಂದ.

ಕುಸುಮಳು ಗೋಪಾಲರಾಯನ ಮನೆಯಲ್ಲಿ ಇರಲು ಒಪ್ಪಲಾರಳೆಂದು ಕಾಂತರಾಯನು ಊಹಿಸಿದ್ದನು. ಅವಳೇ ಹೋಗುವುದಕ್ಕೆ ಸಮ್ಮತಿಸಿದಾಗ ತಾನಾದರೂ ಏಕೆ ವಿರೋಧಿಸಬೇಕು? ಶ್ರೀಧರನು

ಬ್ರಾಹ್ಮಣನಾದುದರಿಂದ ಆವಳವರ ಮನೆಗೆ ಹೋಗುವುದರಲ್ಲಿ ಯಾವ ಆತಂಕವೂ ಇರಲಾರದೆಂದು ನೆನೆದನು. ಇವನಿಗೆ ಕುಸುಮಳ ತಾಯಿಯ ಜಾತಿಯ ಗುಟ್ಟು ಇನ್ನೂ ತಿಳಿದಿರಲಿಲ್ಲ. ಆದರೆ ನಗರದಲ್ಲಿದ್ದ ಕುಸುಮ ಳಿಗೆ ಹಳ್ಳಿಯಲ್ಲಿರಲು ಕಷ್ಟವೆನಿಸಬಹುದೆಂದು ಮಾತ್ರ ನೆನೆದನು.

ಪ್ರಭಾಕರನೂ ಇವನಲ್ಲೇ ಉಳಿದನು. ರಾತ್ರಿ ಮಲಗಿದಾಗ ಕಾಂತರಾಯನು "ಏನೋ ಪ್ರಭಾಕರ್? ಕುಸುಮಳ ಮುಂದಿನ ಜೀವ ನದ ಹಾದಿ ಹ್ಯಾಗೋ" ಎಂದು ಕೇಳಿದ.

"ಅಷ್ಟೇಕೋ ಯೋಚನೆ? ಆಸ್ತಿ ಇದೆ. ಯಾವನೋ ಒಬ್ಬ ಒಳ್ಳೇ ಯುವಕ ಬಂದು ಮದುವೆಯಾಗುವನು.''

"ವಿಧಿಯ ರೀತಿಯೇ ಬೇರೆ. ಇಂಥ ಸುಗುಣಿಗೆ ಯಾವನೋ ದಡ್ಡ ಗಂಟು ಬೀಳುವನು.''

"ಹಾಗೇನೂ ಆಗೋದಿಲ್ಲ. ಇಂಥ ಸುಶಿಕ್ಷಿತಳನ್ನು ಮೋಸ ಮಾಡಲು ಸುಲಭವಲ್ಲ. ಅವಳೆದುರಿಗೆ ಹೋಗಿ, 'ನನ್ನನ್ನು ಮದುವೆ ಯಾಗೆಂದು' ಕೇಳುವ ಧೈರ್ಯ ಯಾರಿಗೂ ಬರಲಾರದು''.

"ಅದೇಕೋ ಹೋಗಲಿ ಪ್ರಭಾಕರ್, ನೀನಿನ್ನೂ ಬ್ರಹ್ಮಚಾರಿ ತಾನೆ? ಅವಳನ್ನು ಮದುವೆಯಾದರೆ ತಪ್ಪೇನು? ಇಲ್ಲೇ ಉಳಿದು ಬಿಡು ವಳು. ಅವಳ ಜೀವನದ ಸಮಸ್ಯೆಯೂ ಬಗೆಹರಿದಂತಾಗುವುದು".

"ಅಬ್ಬ! ನಾನೇ! ನನಗೇಕೋ ಧೈರ್ಯ ಸಾಲದು ಮಹಾರಾಯಾ. ಹಾಸ್ಯ ಮಾಡ್ತೀಯಾ?"

"ಯಾಕೋ? ಇದರಲ್ಲೇನು ಅಪಹಾಸ್ಯ?''

"ಅಲ್ಲಪ್ಪ. ನಿನ್ನ ಮನಸ್ಸಿಗೆ ಬಂದರೆ ನಾನವಳನ್ನು ಮದುವೆಯಾಗ ಬಹುದು. ನೀನು ನಾನು, ಸುಧಾರಿಸಿದವರಂತೆ ಕಾಣುತ್ತೇವೆ. ಆದರೆ ಇಂಥ ಸುಶಿಕ್ಷಿತಳನ್ನು ಮದುವೆಯಾಗಿ ನಮ್ಮಪ್ಪ ಅಮ್ಮನ ಹತ್ತಿರ ಕರ ಕೊಂಡು ಹೋದರೆ, ಅಂಥ ಕಾಡು ಸ್ವಭಾವದವರ ನಡುವೆ, ಕುಸುಮ ಳೆಂದಿಗೂ ಜೀವಿಸಲಾರಳು. ಇದಕ್ಕೂ ನಾನು ಬಡವನಲ್ಲವೆ?''

''ಬಡವನಾದ್ರೇನು ತಪ್ಪು? ಕುಸುಮಳಿಗೆ ಬೇಕಾದಷ್ಟು ಹಣ

ಬಿಟ್ಟು ಹೋಗಿದ್ದಾನೆ ಅವಳಪ್ಪ. ನೀವಿಬ್ಬರು ಕೂತು ಸುಮ್ಮನೇ ಕಾಲ ಕಳೆಯಬಹುದು.''

"ಭಲೋ ಹೇಳಿದಿ! ಹೆಣ್ಣಿನ ಆಸ್ತೀ ಮೇಲೆ ಬಿದ್ದಿರುವ ದಿನಗಳು ಕೂಡಾ ಬಂದಿವೆ. ಆಗಲಿ, ಮಾಡೋದಿನ್ನೇನು? ಆಗಲಪ್ಪಾ. ಅಂಥಾ ಕೆಲಸಾನೇ ಮಾಡೋಣಾಂತೆ. ನನ್ನ್ಯಾಕೆ ಗೋಳಾಡಿಸುತ್ತೀ, ಮಹಾರಾಯ. ನನ್ನ ಹಣೇಲಿ ಅಂಥ ಅದೃಷ್ಟ ಬರೆದಿಲ್ಲ. ಆಯಿತು, ಎಲ್ಲಾದರೂ ರೂಪವಂತ ವಿದ್ಯಾವಂತನನ್ನು ಮದುವೆಯಾಗಿ ಸುಖವಾಗಿ ಬಾಳಲಿ ಆ ಪುಣ್ಯಾತ್ಮಳು. ಅಂಥ ಬೇರೊಬ್ಬನನ್ನು ತಂದು ಮದುವೆ ಮಾಡಿಸು.''

"ಕುಸುಮಳು ಬೆಳೆದ ಹುಡುಗಿ ಎಂದೇನಾದರೂ ನಿನಗೆ ಬೇಸರವೆ?"

"ನಿನಗ್ಯಾಕೋ ಇವತ್ತು ತಲೆಕೆಟ್ಟಂತೆ ಕಾಣ್ತದೆ. ಸಾಕುಮಾಡೋ ನಿನ್ನ ಪುರಾಣ. ರಾತ್ರಿ ಹೊತ್ತಾತು. ನಾಳೆ ಬೇರೇ ರಾತ್ರಿ ಎಲ್ಲಾ ನಿದ್ರೆಕೆಡೋ ಪ್ರಸಂಗ ಇದೆ. ನಿದ್ದೆ ಬರ್ತದ''. ಎಂದು ಮಾತು ಮುಗಿಯಿಸಿ ಬಿಟ್ಟ ಪ್ರಭಾಕರ. ನಿಶ್ಚಿಂತನಾದ ಕಾಂತನಿಗೆ ಬೇಗ ನಿದ್ದೆ ಹತ್ತಿತು ಆದರೆ ಮೊದಲಿನಿಂದಲೂ ಕುಸುಮಳಿಗೆ ನಿಜವಾಗಿಯೂ ಹೆಚ್ಚಿನ ಸಹಾಯ ಮಾಡಬೇಕೆಂದು ಮನಃಪೂರ್ವಕ ನಿಶ್ಚಯಿಸಿದ ಪ್ರಭಾಕರನಿಗೆ ನಿದ್ದೆ ಬರಲಿಲ್ಲ. ತನ್ನ ಮನಸ್ಸಿನಲ್ಲಿದ್ದ ಭಾವನೆಯನ್ನು ಇವನು ಹೇಗೆ ಕಂಡು ಹಿಡಿದ? ಕುಸುಮಳಂಥ ಸರಳ ಸ್ವಭಾವದ ಹೆಣ್ಣನ್ನು ಮದುವೆಯಾಗಿ ಸುಖದಿಂದಿರಲು ಯಾವ ಮಹಾರಾಯನು ಪುಣ್ಯ ಮಾಡಿರುವನೋ. ತಾನಾಗಿಯೇ ಹೋಗಿ ನನ್ನನ್ನು ಮದುವೆಯಾಗೆಂದು ಕೇಳಲು ಅಸಭ್ಯತೆ. ಕಾಂತರಾಯನ ಮಧ್ಯಸ್ಥಿಕೆಯಿಂದ ಕೆಲಸ ಕೈಗೂಡುವಂತೆ ಮಾಡೆಂದು ಅವನಿಗೆ ಸೂಚಿಸಲು ನಾಚಿಕೆ. ಅವಳಲ್ಲಿ ಪ್ರಭಾಕರನಿಗೆ ಹೆಚ್ಚು ಮಮತೆ ಇತ್ತು. ತಾನು ಪ್ರೀತಿಸಿದಂತೆ ಇನ್ನಾವನೂ ಅವಳನ್ನು ಆರಾಧಿಸನೆಂದು ತಿಳಿದಿದ್ದನು.

ಇಬ್ಬರಿಗೂ ಪರಿಚಯವಿನ್ನೂ ಹೆಚ್ಚಾಗಿ ಆಗಿರಲಿಲ್ಲ. ಆದರೂ ಅವರಿಬ್ಬರ ಮನಸ್ಸುಗಳು ಒಂದಾಗಿವೆಯೆಂದು ಅವನಿಗೆ ಮನವರಿಕೆ

ಯಾಗಿತ್ತು. ತಾವು ಆದರ್ಶ ದಂಪತಿಗಳಾಗಬಹುದೆಂಬ ಹಿರಿದಾಶೆ ಇದ್ದಿತು. ಎಂದಿಗಾದರೂ ಕುಸುಮಳು ತನ್ನವಳೇ ಆಗುವಳೆಂದು ಅವನ ಹೃದಯ ಹೇಳುತ್ತಿತ್ತು. ಈ ನಿಶ್ಚಯ ಮೊದಲನೆಯ ದಿನ ಅವಳನ್ನು ಕಂಡಾಗಲೇ ಇವರಿಬ್ಬರ ಕಣ್ಣುಗಳೆರಡೂ ಕಲೆತಾಗ, ಕದ್ದು ಒಬ್ಬರನ್ನೊಬ್ಬರು ನೋಡಿಕೊಂಡಾಗ, ಅಂದು ಅವರ ಮನೆಯಲ್ಲಿ ಒಬ್ಬಳೇ ಕುಳಿತಾಗ ತಾನು ತೋರಿದ ಸಹಾನುಭೂತಿಗೆ ಅವಳು ಹೊಂದಿದ ಸಮಾಧಾನ, ಇವುಗಳೆಲ್ಲವೂ ಕುಸುಮಳು ತನ್ನವಳೇ ಆಗುವಳೆಂದು ಖಂಡಿತ ತಿಳಿದಿದ್ದನು. ಇಂತಹ ಭರವಸೆಯೂ ಆಶೆಯೂ ಅವನಲ್ಲಿ ನೆಲೆಗೊಂಡಿತ್ತು. ತನ್ನ ಈ ಆಶೆ ಎಂದಿಗೂ ಸುಳ್ಳಾಗದೆಂದು ಖಂಡಿತ ನಂಬಿದ್ದನು. ಕುಸುಮಳು ಇಷ್ಟರಲ್ಲಿ ಇನ್ನೊಬ್ಬರವಳಾಗಲಾರಳೆಂದು ನಂಬಿದ್ದನು.

ಮಾರನೆಯ ದಿನ ಕಾರ್ಯಕ್ರಮವೆಲ್ಲ ಸಾಂಗವಾಗಿ ನಡೆಯಿತು. ಕುಸುಮಳಿಲ್ಲದ ಈ ಸಮಾರಂಭಕ್ಕೆ ಹೆಚ್ಚು ಕಳೆ ಬಂದಿದ್ದಿಲ್ಲ. ಆದರೂ ನಿಶ್ಚಯಿಸಿದಂತೆ ಕಾಂತ ಪ್ರಭಾಕರರು ನಾಟಕ ಮುಗಿಯಿತೆಂದೆನಿಸಿದರು. ಇಬ್ಬರಿಗೆ ಕುಸುಮಳನ್ನು ಕಂಡು ಬರಬೇಕೆಂಬ ಆಶೆ ಬಹಳ ಇದ್ದಿತು.

## ೭

ಕುಸುಮಳ ತಂದೆ ತೀರಿಕೊಂಡ ಮೂರನೆಯ ದಿನ ಚಿಕ್ಕಪ್ಪ ನೊಂದಿಗೆ ಹೊರಡುವುದೆಂದು ನಿಶ್ಚಯಿಸಲ್ಪಟ್ಟಿತ್ತು. ಕುಸುಮಳಲ್ಲಿ ಬಂದ ಎಡರು ತೊಡರುಗಳನ್ನೆದುರಿಸುವ ಧೈರ್ಯವಿತ್ತು. ಒಂದೇ ಒಂದು ವಾರದಲ್ಲಿ ಇಂಥ ಪ್ರಸಂಗಗಳು ಆಗಿ ಹೋದುದು ಅವಳಿಗೆ ಆಶ್ಚರ್ಯ ವೆನಿಸಿತು. ರಾಜಮಹೇಂದ್ರವರದಂಥ ದೊಡ್ಡ ನಗರದಲ್ಲಿ ತಾನಿದ್ದು ಸಮಾಜ ಸುಧಾರಿಸುವ ಕೆಲಸದಲ್ಲಿ ಭಾಗವಹಿಸಬೇಕೆಂಬ ಆಶೆಯನು ಬಿಟ್ಟುಬಿಡಬೇಕಾಯಿತು. ಇಷ್ಟಾದರೂ ಮತ್ತೆ ನಗರಕ್ಕೆ ಬಂದು ಸುಧಾರಿಸಿದ ಜನರ ನಡುವೆ ಇರಬೇಕೆಂಬ ಆಶೆ ಮಾತ್ರ ಇತ್ತು. ಹೀಗೆಂದು ಕಾಂತ ಪ್ರಭಾಕರರು ಅವಳನ್ನು ಬೀಳ್ಕೊಡಲು ಬಂದಾಗ ತನ್ನ ಅಭಿಪ್ರಾಯ ವ್ಯಕ್ತಗೊಳಿಸಿದಳು.

ಇಬ್ಬರೂ ಬಂದು ಕುಸುಮಳನ್ನು ಕಂಡು, ಅವಳಿಗೆ ಧೈರ್ಯ ಹೇಳಿ ಪರಸ್ಪರರ ವಿಳಾಸಗಳನ್ನು ಬರೆದುಕೊಂಡು ಹೊರಟು ಹೋದರು. ಸಾಯಂಕಾಲದ ಗಾಡಿಗೆ ಅವಳು ಹೊರಡುವುದೆಂದು ನಿರ್ಣಯವಾಗಿದ್ದು ದರಿಂದ ನಿಲ್ದಾಣಕ್ಕೆ ಹೋಗಿ ಕಂಡುಬಂದರು. ಮನೆಗೆ ಹಿಂತಿರುಗುವಾಗ ಪ್ರಭಾಕರನಿಗೆ ಬಹಳ ವ್ಯಥೆಯಾಯಿತು. ತನ್ನ ಪ್ರೀತಿಯ ವಸ್ತುವನ್ನು ಯಾರೋ ದೂರ ಸೆಳೆದುಕೊಂಡು ಹೋಗುವಂತೆನಿಸಿತು. ಕಾಂತನ ಅವಸ್ಥೆಯೂ ಅದೇ ತರಹದಾಗಿದ್ದಿತು. ಇಬ್ಬರೂ ಮನಸ್ಸಿನಲ್ಲಿಯೇ ಯೋಚಿಸಿ ಮರುಗಿದರು.

ಮೂರನೆಯ ದಿನ ಪ್ರಭಾಕರನು ತಮ್ಮೂರಿಗೆ ಹೊರಡಲು ಕಾಂತ ರಾಯನ ಅಪ್ಪಣೆ ಪಡೆದು ಮನೆಗೆ ಬರುವ ಹೊತ್ತಿಗೆ ಮನೆಯಲ್ಲಿ ತಾಯಿ ಆರ್ಭಟಿಸ ಹತ್ತಿದಳು "ಯಾಕಪ್ಪ ಪ್ರಭಾಕರ? ಇಷ್ಟು ದಿನ ಎಲ್ಲಿ ಹೋಗಿದ್ದಿ? ಅಲ್ಲಾ, ಇಂಥಾ ಊರಿಗೆ ಹೋಗುವೆನೆಂದಾದರೂ ತಿಳಿಸಿ ವಿಳಾಸವನ್ನಾದರೂ ಕೊಟ್ಟು ಹೋಗಬಾರದೆ? ಓದು ವು ದೆ ಲ್ಲ ವೂ ಮುಗಿಯಿತೆಂದು ಹೀಗೆ ಊರೂರು ಅಲೆಯೋದೇನಪ್ಪಾ?"

"ಈಗೇನಾಯಿತು, ಅಂಥಾ ಪ್ರಮಾದ?"

"ಪ್ರಮಾದ ಯಾಕೋ. ಹಾಲು ತುಪ್ಪ ಅನ್ನ. ನೋಡು ಬಹಳ ದಿನಗಳಿಂದ ಕಾಗದ ಬರೀತಿದ್ದರು ರಾಮಾಶಾಸ್ತ್ರಿಗಳು. ತಮ್ಮ ಹುಡುಗೀನ ನಿನಗೆ ಕೊಡಬೇಕಂತೆ. ನಾಲ್ಕು ಸಾವಿರ ನಗದು ರೊಕ್ಕ ಚೆಲ್ಲಿ ಮಗಳನ್ನು ಕೊಡ್ತಾರಂತೆ. ನಮ್ಮ ಮನೀನ, ನಿನ್ನ, ನೋಡಿಕೊಂಡು ಹೋಗೋಣಾಂತ ಬಂದಿದ್ದರು...."

"ಹೂಂ. ಅದೇ ಅಲ್ಲೋ ಹಳೇ ಪುರಾಣ. ಈಗ ತಾನೇ ಕನ್ಯಾ ಶುಲ್ಕ ನಾಟಕಾ ಆಡಿ ಬಂದೆ....ಮುಂದೆ ಏನಾಯಿತು?"

"ಹಾದೀ ನೋಡಿ, ನೋಡಿ, ಹೋದ್ರಪ್ಪಾ. ಹುಡುಗೀನು ಬಂದಿದ್ದಳು. ಸುರೂಪಿ. ಮೇಲೆ ನಾಲ್ಕು ಸಾವಿರ...."

"ಸಾಕಮ್ಮ ನನ್ನಂಥ ಗಂಡು ಹುಡುಗರನ್ನು ಹಡೆದು ನನ್ನನ್ನು ಮಾರಿಕೊಳ್ಳುವ ಪ್ರಯತ್ನ ನಿಮ್ಮದು. ಅಲ್ಲಾ ಹೇಳಿಬಿಡು, ನೀನೇನು ನನ್ನ ತಾಯೋ? ಅಥವಾ ಅವರ ಪಕ್ಷ ವಹಿಸಿ ಮಾತನಾಡುವ ವಕೀಲಳೋ?"

"ಹೀಗ್ಯಾಕೆ ಬುದ್ಧಿಗೇಡಿ ಮಾತು ಬರ್ತ್ತವೋ ಇವತ್ತು? ಏನಾಗೇದ? ನಿನ್ನ ಮಾರೀಗೆ ಯಾರು ಕೊಡ್ತಾರಪ್ಪಾ ನಾಲ್ಕು ಸಾವಿರ ರೂಪಾಯಿ?"

"ಅಂದರೆ ಅವರ ರುಪಾಯೀನ ಮದುವಾಗಲೇನು? ಹುಡುಗಿಯ ಗುಣ, ಆಚಾರ, ಮನೆತನ, ಮತ್ತೇನು ಬೇಡವೆ? ರೊಕ್ಕ ಬಂದರಾತು. ಆಂ? ಅಲ್ಲ, ನಮ್ಮಂಥ ಬಡವರಿಗೆ ಯಾಕಷ್ಟು ರೊಕ್ಕಾ ಕೊಟ್ಟು ಹೆಣ್ಣು ಕೊಡುತ್ತಾರೆ? ನೀನೇ ಯೋಚನೇ ಮಾಡು ಸ್ವಲ್ಪ."

"ಹುಡುಗೀ ಮೇಲೆ ಏನದೋ ಅಪವಾದ? ಪಾಪ, ಯಾರೋ ಆಗದೋರು ಹುಡುಗಿ ವೈನೆರದದ ಅಂತ ಸುದ್ದಿ ಹಬ್ಬಿಸ್ಯಾರೆ. ಆಚಾರವಂತರು ಯಾರೂ ಮದುವ್ಯಾಗಲ್ಲೋರು. ಹೀಗೆಂದು ಇಷ್ಟು ವರದಕ್ಷಿಣೆ ಕೊಡೋದಕ್ಕೆ ಮುಂದೆ ಬಂದಾರಂತ ಕಾಣ್ತದೆ."

"ಅವರಿಗೆ ಅಷ್ಟು ನಿಷ್ಟುರವಾದರೆ, ಕಟ್ಟಿಗೊಂಡು ನೀನು ಮಾತ್ರ ಕಷ್ಟ ಪಡೋದಿಲ್ಲೇನು?"

"ಅದೆಲ್ಲಾ ಯಾರಿಗೆ ಗೊತ್ತು? ಏನಾದರೂ ಹೇಳಿ ಸಮಾಧಾನ ಮಾಡಿಕೊಂಡ್ರಾತು."

"ಛಲೋ ಎಗರ್ಲಾಕೋ ಮಾತು ನಿಂದು, ಅಲ್ಲಾ. ಬ್ರಾಹ್ಮಣರ ಹುಡುಗೀಂತ ಸೂಳೇರ ಹುಡುಗೀನ ತಂದು ಮದುವೆ ಮಾಡೋಣ ಬಹಳಾಷ್ಟು ರೊಕ್ಕ ಸುರುವಿದರೂಂದ್ರೆ? ಸಾಕವ್ಮಾ ನಿನ್ನ ಮದುವೆ ಮಾತು. ನನಗೇಕೋ ಈಗ ಬೇಡಾಗಿದೆ ಮದುವೆ."

ತಾಯಿ ನಿರಾಶೆಯಿಂದ ಬಹಳ ಕೋಪಗೊಂಡಳು. ಗಂಡನಿಗೆ ಕೇಳಿಸುವಷ್ಟು ಗಟ್ಟಿಯಾಗಿ "ಇಲ್ಲಿ ನೋಡ್ರಿ, ಶಾಸ್ತ್ರೀ ಮನೇಗೆ ಬಂದ್ರೆ ನಮ್ಮ ಮೇಲೆ ಇಶೆ ಇಟ್ಕೊಳ್ಳ ಬೇಡೀಂತ ಹೇಳಿ ಕಳಿಸಿ ಬಿಡ್ರಿ. ಇಲ್ಲದಿದ್ದರೆ ಇವತ್ತೆ ಒಂದು ಕಾಗದಾ ಹಾಕಿ ಬಿಡ್ರಿ, ಮತ್ತೆ." ಪ್ರಭಾಕರನ ತಂದೆ ಮನೆಯಲ್ಲಿ ಅನಾಮಧೇಯ. ಅವನು ತಾಯಿ ಮಗನ ರಗಳೆಯನ್ನು ಸುಮ್ಮನೇ ನೋಡುತ್ತ ಕೂತಿದ್ದ. ಹೆಂಡತಿಯ ಆಜ್ಞೆಗೆ ಹೂಂಗುಟ್ಟಿದ.

## ೮

ಚಿಕ್ಕಪ್ಪನ ಮನೆಗೆ ಹೋದ ಮೂರು ನಾಲ್ಕು ದಿನಸದಲ್ಲಿ ಕುಸು ಮಳು ಪ್ರಭಾಕರನಿಗೊಂದು ಪತ್ರ ಬರೆದಳು. ಆದರಲ್ಲಿ ತಾನಿದ್ದ ಮನೆಯ ಜನರು, ಅವರ ನಡತೆ, ಊರ ಜನರ ಬಗ್ಗೆ ಎಲ್ಲಾ ವಿವರಗಳನ್ನು ಬರೆ ದಿದ್ದಳು. "ಈ ಊರಲ್ಲಿ ಎಲ್ಲೆಲ್ಲಿಯೂ ಪ್ರಶಾಂತತೆ ಇದ್ದರೂ ಒಂದೊಂದು ಸಮಯ ನನಗೆ ಹುಚ್ಚು ಹಿಡಿದಂತಾಗುತ್ತದೆ. ಮನಸ್ಸಿನಲ್ಲಿ ಒಂದು ಬಗೆಯ ಸಂಕಟವಾಗುತ್ತಿದೆ. ವೇಗವಾದ ವಾಹನದಲ್ಲಿ ಕುಳಿತು ಎಲ್ಲಿ ಗಾದರೂ ಓಡಿ ಹೋಗೋಣವೆಂದೆನಿಸುತ್ತದೆ. ಈ ಏಕಾಂತ ವಾಸದಿಂದ ನನಗೆ ಶಾಂತಿ ಇಲ್ಲ. ಹೃದಯದ ವೇದನೆ ಹೆಚ್ಚುತ್ತಿದೆ. ಜನರ ನಡುವೆ ಇದ್ದು ಬಾಳಿ, ಜೀವನದ ತಿರುಳನ್ನು ಆರಿತು, ಇನ್ನಿತರ ಜನರಿಗೆ ಸಹಾಯ ಕಳಾಗಿ, ಪರೋಪಕಾರಿ ಜೀವಿಯಾಗಬೇಕೆಂಬ ನನ್ನ ಧ್ಯೇಯ ಮಣ್ಣು ಗೂಡುವಂತಿದೆ. ನಿಮ್ಮ ಜತೆಯಲ್ಲಿ ದೊರೆಯುತ್ತಲಿದ್ದ ಮನಶ್ಶಾಂತಿ, ಇಲ್ಲಿ ಒಬ್ಬಳೇ ಇದ್ದರೂ ದೊರೆಯುವಂತಿಲ್ಲ. ನೀವೆಂತಿರುವಿರಿ? ಮಾರು ತ್ತರ ಬರೆಯಿರಿ" ಎಂದು ಪತ್ರ ಮುಗಿಸಿದ್ದಳು.

ಇದಕ್ಕೆ ಮಾರುತ್ತರವಾಗಿ ಹನ್ನೆರಡು ಪುಟಗಳಷ್ಟು ಪತ್ರ ಬರೆದು ಕಳಿಸಿದ ಪ್ರಭಾಕರನು. ತನ್ನ ಬಗ್ಗೆ ಯಾವುದನ್ನೂ ಬರೆದಿರಲಿಲ್ಲ.

ಮೂರು ದಿನಗಳ ನಂತರ ಪ್ರಭಾಕರನಿಗೊಂದು ಟೆಲಿಗ್ರಾಂ ಕಾಂತ ರಾಯನಿಂದ ಬಂತು. ಬೇಗ ಬಂದು ಬಿಡಬೇಕೆಂದು ತಿಳಿಸಿದ. ಹೊರ ಡಲೇ ಬೇಕಾಯಿತು. ತಾಯಿಗೆ ಸಮಾಧಾನ ಹೇಳಿ ಬೇಗ ಬಂದು ಬಿಡುವೆನೆಂದು ವಚನ ಕೊಟ್ಟು ಹೊರಡುವಾಗ, "ನನಗೇನಾದರೂ ಕಾಗದಗಳು ಬಂದರೆ ಇಲ್ಲೇ ಕಾದಿಡಬೇಕಮ್ಮಾ, ಮರೆಯಬೇಡ" ಎಂದು ಹೇಳಿ ರೈಲಿಗೆ ಹೊರಟ.

ಕಾಂತನು ಗುಂಟೂರು ನಿಲ್ದಾಣದಲ್ಲಿ ಬಂದು ಕಾದಿದ್ದು, ಪ್ರಭಾ ಕರನನ್ನು ಮನೆಗೆ ಕರೆದುಕೊಂಡು ಹೋದ. ಸ್ನಾನ ಊಟ ಮುಗಿದ ಮೇಲೆ "ಬೆಜವಾಡದಲ್ಲಿ ನಮ್ಮ ಸೋದರಮಾವನು ಒಂದು ನಾಟಕ ಕಂಪೆನಿಯನ್ನು ನಡೆಸುತ್ತ ಬಂದಿರುವನು. ಒಂದು ಕಾಲಕ್ಕೆ ಆದು

ಬಹಳ ಹೆಸರಾದ ಕಂಪೆನಿಯಾಗಿತ್ತು. ಹೆಚ್ಚಿನ ಲಾಭವೂ ದೊರೆಯು ತ್ತಿತ್ತು. ಈಗ ಆ ಕಂಪೆನಿ ಬಹಳ ಹೀನ ಸ್ಥಿತಿಯಲ್ಲಿದೆಯಂತೆ. ಅನು ಕೂಲವಾದರೆ ನಾನದನ್ನು ನಡೆಯಿಸಿಕೊಂಡು ಬರಬೇಕಂತೆ. ಇಲ್ಲ ವಾದರೆ ಯಾರಿಗಾದರೂ ಮಾರಿಬಿಟ್ಟು ಮನೆ ಸೇರುವನಂತೆ ಇನ್ನೇನು? ನಾವಿಬ್ಬರೂ ಅಲ್ಲಿಗೆ ಹೋಗಿ ಒಂದು ಕೈ ನೋಡಿ ಬಿಡೋಣವೇ ಎಂಬ ಯೋಚನೆ ಬಂದು ನಿನ್ನನ್ನು ಬರಮಾಡಿಕೊಂಡೆ" ಎಂದು ಕಾಂತರಾ ಯನು ವಿವರಿಸಿದ.

"ಸಂತೋಷದಿಂದ ಹೋಗುವ. ಇದಕ್ಕಿಂತಲೂ ನಮಗೆ ಸುಖ ಕರವಾದ, ಮತ್ತು ನಮ್ಮ ಅಭಿರುಚಿಗೆ ಅನುಕೂಲವಾದ ಕೆಲಸವು ದೊರೆಯಬಹುದೆ? ಎಂದು ಹೊರಡುವುದು?"

"ಇಂದೇ."

"ನಾಳೆ ಹೋದರಾಯಿತು. ಕುಸುಮಳಿಗೆ ಪತ್ರ ಬರೆದು ಹೋಗುವ."

"ಆಗಲಿ. ನಾನೇಕೆ ಬೇಡವೆನ್ನಲಿ?"

ಇಬ್ಬರೂ ಕಲೆತು ಅವಳಿಗೆ ಪತ್ರ ಬರೆದರು. ತಾವು ಬೆಜವಾಡ ದಲ್ಲಿ ಇರುವೆವೆಂದೂ, ತಮ್ಮಿಂದ ಇನ್ನೊಂದು ಕಾಗದ ಬರುವ ವರೆಗೆ ಮಾರೋಲೆ ಬರೆಯಬಾರದೆಂದೂ ಬರೆದಿದ್ದರು. ದುರ್ದೈವದಿಂದ ಈ ಕಾಗದ ಕುಸುಮಳಿಗೆ ಸೇರಲೇ ಇಲ್ಲ. ಹಳ್ಳಿಗೆ, ಕಾಗದ ಸೇರುವ ಹೊತ್ತಿಗೆ ಅವಳು ಆ ಊರು ಬಿಟ್ಟು ಹೋಗಿದ್ದಳು.

ಒಂದು ವಾರದಲ್ಲಿ ಕುಸುಮಳಿಗೆ ಹಳ್ಳಿಯಲ್ಲಿಯ ಚಿಕ್ಕಪ್ಪನ ಮನೆ ನರಕವೆನಿಸಿತು. ಆದರ ಬಗ್ಗೆ ಪ್ರಭಾಕರನಿಗೇನೂ ಬರೆಯುವ ಗೋಜಿಗೆ ಹೋಗಿರಲಿಲ್ಲ.

ಗೋಪಾಲರಾಯನು ಹೆಂಡತಿಯ ಮಾತಿಗೆ ಎದುರಾಡುತ್ತಿರಲಿಲ್ಲ. ಆ ಧೈರ್ಯವೂ ಇರಲಿಲ್ಲ. ಆದರ ಮೇಲೆ ಎರಡನೆಯ ಮದುವೆ. ಕೇಳಬೇಕೇ? ಆವಳ ದರ್ಪವೇ ದರ್ಪ. ಹಳೆಯ ಆಚಾರದ ನಡತೆಯ ಮನೆ. ಕುಸುಮಳಿಗೆಂದು ಹೊರಗಿನ ಕೋಣೆಯನ್ನು ಇರಲು ಕೊಟ್ಟಿ ದ್ದರು. ಆ ಕೋಣೆಯೇ ಆವಳ ಸರ್ವ ಪ್ರಪಂಚ. ಹೊರಗೆ ಹೋಗ

ಬಾರದು. ಒಳಗೆ ಬರಕೂಡದು. ಈ ಕಠಿಣ ಶಿಕ್ಷೆಗೆ ಮೊದಲು ಸಿಟ್ಟು ಬಂತು. ತಾಳ್ಮೆಯಿಂದ ಸ್ವಲ್ಪ ಸೈರಿಸಿಕೊಂಡಳು. ಗೋಪಾಲರಾಯ ನಿಗೆ ಮಮತೆ ಇದ್ದರೆ, ಅವನ ಹೆಂಡತಿಗೆಲ್ಲಿಂದ ಬರಬೇಕು ಪ್ರೀತಿ ವಿಶ್ವಾಸ? ಕುಲವಿಲ್ಲದ ಹೆಣ್ಣೆಂದು ತಿಳಿದು, ಅವಳಲ್ಲಿ ಸಹಾನುಭೂತಿ ತೋರಬೇಕೆಂದು ಎಲ್ಲಿ ಹೇಳಿದೆ? ಇಂಥಾ ಹಳ್ಳಿಯಲ್ಲಿ ವಿಶಾಲವಾದ ಭಾವನೆಗಳು, ಉದಾತ್ತವಾದ ಅಭಿಪ್ರಾಯಗಳು ಕಷ್ಟದಲ್ಲಿದ್ದ ಜನರಿಗೆ ಸಹಾಯಮಾಡುವ ಔದಾರ್ಯ ಕಾಣುವುದು ಕಷ್ಟದ ಮಾತೇ ಸರಿ.

ಒಂದು ದಿನ ಮುಂಜಾನೆ ಐದು ವರುಷದ ಹುಡುಗ, ಎಂಟು ವರುಷದ ಹುಡುಗಿ ಇಬ್ಬರೂ ಇವಳ ಕೋಣೆಯ ಹತ್ತಿರ ಬಂದರು. ಅವಳೇನು ವಿನೋದ ವಸ್ತುವೇನೋ ಎಂಬಂತೆ ನೋಡ ಹತ್ತಿದರು. ಕುಸುಮಳು ಇಬ್ಬರನ್ನೂ ಬಾಯೆಂದು ಕರೆದಳು. ಹುಡುಗ ಮಾತ್ರ ಹತ್ತಿರ ಬಂದ. ಹುಡುಗಿ ಬಾರದೇ ದೂರ ನಿಂತು ನನ್ನನ್ನು ಮುಟ್ಟಿ ಕೊಳ್ಳಬೇಡವೆಂದು ಹೇಳಿದಳು. ಮನಸ್ಸು ಕಳವಳವೆನಿಸಿತು. ಅವಳಿ ಗೆಲ್ಲಿಯ ವೈಲಿಗೆ? ಏನೂ ತಿಳಿಯದ ಸಣ್ಣ ಹುಡುಗರಿಗೂ ಇಂಥಾ ಅಭಿಪ್ರಾಯಗಳನ್ನು ತಲೆಯಲ್ಲಿ ಹಾಕಿ ಸಂಕುಚಿತ ರೀತಿಯಲ್ಲಿ ವರ್ತಿಸಲು ಅನುವು ಮಾಡಿಕೊಡುವುದು ಹಳ್ಳಿಗರ ದಿನದ ಕೆಲಸವೆಂದು ಕಾಣುತ್ತದೆ. ಹುಡುಗನು ಬಂದವನೇ ತೊಡೆಯ ಮೇಲೆ ಕುಳಿತು "ನೀನು ನಮ್ಮಕ್ಕ ಅಲ್ಲವೇ" ಎಂದು ಪ್ರೀತಿಯಿಂದ ಕೇಳಿದ.

"ಅಹುದು ನಿನ್ನ ಹೆಸರೇನಪ್ಪಾ?"

"ಬಾಬು"

ಇವನ್ನೆಲ್ಲಾ ನೋಡುತ್ತ ದೂರ ನಿಂತಿದ್ದ ಆ ಹುಡುಗಿಗೆ ಕೋಪ ಬಂತು. ತಮ್ಮನನ್ನು ತಾಯಿಯಿಂದ ಒದೆಯಿಸಬೇಕೆಂದು ಮನಸ್ಸು ಮಾಡಿ "ಅಮ್ಮಗೆ ಹೇಳ್ತೀನೆ ತಾಳು, ಇವಳನ್ನು ಮುಟ್ಟಿಕೊಂಡೇ ಯೆಂತ" ಎಂದು ಹೇಳುತ್ತಾ ಅಲ್ಲಿಂದ ಹೊರಟು ಹೋದಳು.

ಬಾಬುಗೆ ಭಯವೆನಿಸಿತು. ಅಳುಮೋರೆ ಮಾಡಿ "ಅವ್ವಾ ಹೊತ್ತಾಳೆ" ಎಂದು ಕಣ್ಣೀರಿಟ್ಟ.

"ಇಲ್ಲಾ ಬಾಬು, ಭಯಬೇಡ, ನಾನಿದ್ದೇನೆ."

"ಹೊತ್ತಾಳೆ, ಹೊತ್ತಾಳೆ" ಎಂದು ಕೂಗಿಕೊಳ್ಳುತ್ತ ಬಲವಂತ ದಿಂದ ಅವಳನ್ನು ಬಿಟ್ಟು ಮನೆಯೊಳಗೆ ಹೊರಟು ಹೋದ.

ಸ್ವಲ್ಪ ಹೊತ್ತಿನಲ್ಲಿ ಆ ಮಗುವು ಗಟ್ಟಿಯಾಗಿ ಅಳುವ ಧ್ವನಿ ಕೇಳಿಸಿತು. ಮೇಲೆ ಒದೆಗಳು ಬೀಳುವ ಸದ್ದು ಕೇಳಿಸಿತು. ಕುಸುಮಳಿಗೆ ಸಂಕಟವಾಯಿತು. ಪಾಪ, ಹಸುಳೆ ಯಾವ ತಪ್ಪು ಮಾಡದೆ ಒದೆಗಳು ತಿನ್ನಬೇಕಾದುದಕ್ಕೆ ಮರುಗಿದಳು. ಬೇಗ ಮನೆಯನ್ನು ನುಗ್ಗಿ "ಆ ಮಗುವನ್ನು ಹೊಡೆಯಬೇಡಿ. ಕಂದಮ್ಮ ಪಾಪ, ಅವನದೇನು ತಪ್ಪು? ಮಗುವನ್ನು ನಾನೇ ಹತ್ತಿರ ಕರೆದು ಮುಟ್ಟಿಕೊಂಡೆ" ಎಂದು ತಾಯಿಯ ಆರ್ಭಟವನ್ನು ತಡೆದಳು.

ಕುಸುಮಳು ಈ ರೀತಿ ಮನೆಯಲ್ಲಿ ನುಗ್ಗಿ ಬಂದುದರಿಂದ ತಾಯಿಯ ಕೋಪವು ಇಮ್ಮಡಿಯಾಯಿತು. ಆರ್ಭಟಿಸುತ್ತಾ "ಮಹಾ ತಾಯಿ, ಒಳಗೂ ಬಂದು ಬಿಟ್ಟೆಯಾ? ಹಾಳಾಯಿತು ನಮ್ಮ ಆಚಾರ. ಇನ್ನೇನು, ನಾಳೆ ಪುರೋಹಿತರನ್ನು ಕರೆದು ಪವಿತ್ರ ಜಲ ಪ್ರೋಕ್ಷಣೆ ಮಾಡಿಸಬೇಕಾಯ್ತು. ಪುಣ್ಯಾವಾಚನ ಮಾಡಿಸಬೇಕು. ಸಾಕು ಮಾಡೇ ಗಯ್ಯಾಳಿ. ನಿನಗ್ಯಾರು ಬಾ ಅಂದರು ಇಲ್ಲಿ? ನನ್ನ ಮಕ್ಕಳನ್ನು ನಾನೇನಾದರೂ ಮಾಡಿಕೊಳ್ಳುತ್ತೇನೆ." ಎಂದು ಮತ್ತೆರಡೇಟು ಬಾರಿಸಿದಳು ಆ ಹುಡುಗನ ಬೆನ್ನ ಮೇಲೆ.

ಕುಸುಮಳು "ಅಲ್ಲರೀ, ಹುಡುಗಂದೇನು ತಪ್ಪಿದೆ ಇದರಲ್ಲಿ? ಅವರಿಗೆ ಇದೆಲ್ಲಾ ಹೇಗೆ ತಿಳೀತದೆ? ಇಂಥಾ ಸಂಕಟದಿಂದ ನನ್ನನ್ಯಾಕೆ ಮನ್ಯಾಗೆ ಇಟ್ಟುಗೊಂಡು ಅಳ್ತೀರಿ? ನಾನೇ ಹೊರಟು ಹೋಗ್ತೇನೆ" ಎಂದು ರೋಷದಿಂದ ಹೇಳಿದಳು.

"ಸಾಕು, ಹೋಗು ಹೊರಗೆ ನಿನ್ನ ಪುರಾಣ ಸಿಲ್ಲಿಸಿ. ನಮ್ಮ ಮನೆ ಪುಣ್ಯಾಮಾಡಿತ್ತು, ನಿನ್ನಂಥಾ ಮಹಾತ್ಮಳು ಕಾಲಿಡಬೇಕೂಂತ. ಇನ್ನೇನು, ಮನೆಗೊಂದು ಒಳಚಿಲಕ ಮಾಡಿ, ತಲಬಾಗಲೇ ಹಾಕದೇ ಇದ್ದದ್ದು ನನ್ನ ತಪ್ಪು. ಅದನ್ನೂ ನಾಳೆ ಮಾಡಿಸಿ ಬಿಡ್ತೀನಿ. ಏನು ಬಂದೇವ್ಮು ನಮ್ಮ ಮನೇಗೆ ಮಾರಿ ಬಂದ್ಹಾಗೆ!" ಎಂದು ಹೇಳಿದಾಗ,

ಅಲ್ಲಿ ನಿಲ್ಲಲು ಕುಸುಮಳಿಗಾಗಲಿಲ್ಲ. ತನ್ನ ಕೋಣೆಗೆ ಹೋಗಿ ಬಾಗಿಲು ಹಾಕಿಕೊಂಡು ಸುಮ್ಮನೆ ಅತ್ತುಬಿಟ್ಟಳು.

ಮಧ್ಯಾಹ್ನ ಒಂದು ಗಂಟೆ ಆಗಿತ್ತು. ಯಾರೋ ಬಾಗಿಲು ಬಡೆದಂತೆ ತೋರಿತು. ಬಾಗಿಲು ತೆರೆದಾಗ ಮನೆಯ ಕೆಲಸದವಳು ಬಂದು ಹರಕು ಎಲೆಯನ್ನು ಹಾಕಿ, ಆರಿದ ಅನ್ನ, ಹಳಸಿದ ಸಾರು ಹಾಕಿದಳು. ಹಸಿವೆಯೂ ಆಗಿತ್ತು. ಮಾಡುವುದೇನು? ಹೋದಷ್ಟು ಉಣ್ಣಲೇ ಬೇಕಾಯಿತು. ಎಲೆ ಎತ್ತುವಾಗ ಆ ಮನೆಯ ಹಿರಿಯ ಮಗಳು ಬಂದು ಅಲ್ಲಿದೆ ಅಗಳು, ಇಲ್ಲಿ ನಿಂತಿದೆ ಮುಸುರಿ ಎಂದು ಹೇಳಿ ಎಲ್ಲವನ್ನು ಶುಭ್ರ ಮಾಡುವ ವರೆಗೂ ಸುಮ್ಮನಿರಲಿಲ್ಲ. ಇದೆಲ್ಲಾ ನೋಡಿ ಕುಸುಮಳಿಗೆ ತಡೆಯಲಾರದಂಥ ಕೋಪ ಬಂತು.

ಈ ಪರಿಸ್ಥಿತಿ ಸುಧಾರಿಸುವ ಬಗೆ ಹೇಗೆ? ಗೋಪಾಲರಾಯನೋ ಹೆಂಡತಿ ಹೇಳಿದಂತೆ ನಡೆಯುವವ. ಮುಂದೆ ಅಧೋಗತಿಯೆ. ಚಿಕ್ಕಂದಿನಿಂದಲೂ ಇಂಥ ಅವಸ್ಥೆಗೆ ಅವಳು ಎಂದೂ ಗುರಿಯಾಗಿರಲಿಲ್ಲ. ಒಂದೆರಡು ದಿನಗಳಲ್ಲಿಯೇ ಇಂಥ ವರ್ತನೆಯೆ? ಈ ಮನೆಯವರಿಗೆ ಇವಳ ಮೇಲೇಕೆ ಇಂಥ ಅನಾದರಣೆ? ಇದರರ್ಥವೇನು? ಕುಸುಮಳಿಗೆ ಇದೆಲ್ಲವೂ ಹೊಸತೆನಿಸಿತು. ಮರುಗಿದಳು.

"ನನ್ನನ್ನು ಈ ರೀತಿ ಇವರು ಜಾತಿಬಾಹಿರಳಂತೆ ಕಾಣುವುದು ನ್ಯಾಯವೆ? ಇದೇ ಇವರ ಧರ್ಮವಾದರೆ, ಇದರಲ್ಲಿ ನ್ಯಾಯವೆಲ್ಲಿದೆ? ನಾ ಇವರಿಗಿಂತಲೂ ಕಡಮೆಯ ದರ್ಜೆಯವಳೆ? ಓದು ಬರಹ ಬರುತ್ತದೆ. ನನ್ನ ವಿದ್ಯೆಯಿಂದ ಜೀವನದ ಕ್ರಮ ಸುಧಾರಿಸಿಕೊಂಡು ಜನರ ರೀತಿನೀತಿಗಳನ್ನು ತಿಳಿದು ನಡೆಯಲು ಯತ್ನಿಸಿರುವೆನು. ಸ್ಮರಣೆ ಇತರರ ಆಗುಹೋಗು, ಸುಖದುಃಖಗಳ ಕಡೆಗೆ ಲಕ್ಷ್ಯವಿಟ್ಟು ನಮ್ಮ ಜನರಿಗೆ ಸಹಾಯಕಳಾಗಬೇಕೆಂಬ ಮನಸ್ಸು ಇಟ್ಟು ನಡೆಯುತ್ತ ಬಂದಿದ್ದರೂ ಈ ಹಳ್ಳಿಯಲ್ಲಿ ನನಗೇಕೆ ಸಮಾನ ಸ್ಥಾನವಿಲ್ಲ? ಈ ಊರ ಜನರೇಕೆ ಇನ್ನೂ ಮೂಢರಂತಿರುವರು? ನ್ಯಾಯವಿಲ್ಲದ ಇಂಥ ಸಮಾಜದಲ್ಲಿ ನಾನು ಬಾಳುವುದಾದರೂ ಹೇಗೆ?" ಎಂದು ಯೋಚಿಸಿದಳು. ಎಷ್ಟು ಚಿಂತಿಸಿದರೂ ಅವಳ ಬಾಳಿನ ಸಮಸ್ಯೆ ಸುಧಾರಿಸುವ ರೀತಿಯಲ್ಲಿರಲಿಲ್ಲ.

ಇದರಿಂದವಳ ಬಿಡುಗಡೆ ಎಂದು? ಒಂದೆರಡು ದಿನಗಳಲ್ಲಿಯೇ ಇವಳ ಗತಿ ಹೀಗಾಗಿರಲು, ಯಾವಜ್ಜೀವನವೂ ಇವರ ಮನೆಯಲ್ಲಿ, ಈ ಹಾಳು ಹಳ್ಳಿಯಲ್ಲಿ ಕಳೆಯುವ ಬಗೆ ಹೇಗೆ? ಇವರು ಸುಧಾರಿಸುವುದಂತೂ ನಂಬಲಾರದ ವಿಷಯ.

ಕುಸುಮಳಿಗೆ ಈಗ ಬೇಕಾದುದು ಆತ್ಮೀಯತೆಯಿಂದಲೂ ಪ್ರೀತಿಯಿಂದಲೂ ನಡೆದುಕೊಳ್ಳುವವರ ಸಹವಾಸ ಬೇಕಿತ್ತು. ಕೇವಲ ಹಣದಾಸೆಯಿಂದ ಹತ್ತಿರ ಬಂದು ಕಾಡಿಸುವ ಗೊಂದಲದ ಜನರ ಸತ್ವಪರೀಕ್ಷೆಯ ಫಲಿತಾಂಶ ಆಗಲೇ ಆಗಿಹೋಗಿತ್ತು. ಇಷ್ಟು ದಿನ ತಂದೆಯ ಸೇವೆಯಲ್ಲಿ ಕಂಡು ಬಂದ ಸುಖ, ಸಂತೋಷ, ಇನ್ನು ಕಾಣುವುದು ಮದುವೆಯಾದ ಗಂಡನಲ್ಲಿ ಎಂದು ನೆನೆದಳು. ತಂದೆ ಮಕ್ಕಳಲ್ಲಿ ಬೆಳೆದುಬಂದ ಪ್ರೇಮ, ಮಮತೆ, ಜೀವನ ಸಂಗಡಿಗನೊಬ್ಬನು ಬೇಕೆಂದು ಅವಳ ಹೃದಯ ಬಯಸಿತು. ಬಾಳ ಗೆಳೆಯನ ನೆರವು ಬಹಳ ಅವಶ್ಯವಾಗಿತ್ತು. ಇಂಥ ಏಕಾಂತದ ಜೀವನದಲ್ಲಿ ಸುಖವಿಲ್ಲವೆಂಬುವುದು ಆ ಊರಲ್ಲಿ ಕಳೆದ ಎರಡು ದಿನಗಳಲ್ಲಿ ಪೂರ್ಣ ಅರಿವು ಉಂಟಾಗಿತ್ತು. ಅಂದು ಬೆಳಗಿನಲ್ಲಿ ಮಗು ಬಾಬು ಹತ್ತಿರ ಬಂದಾಗ ಅವಳ ಹೃದಯಕ್ಕೆಷ್ಟು ಸಮಾಧಾನವಾಯಿತು!

ಮಗು ಬಾಬುವಿನ ಸ್ನೇಹ, ಪ್ರಭಾಕರನ ನೆನಪು ತಂದುಕೊಟ್ಟಿತು. ಮಾನವನು ಏಕಾಂತದಲ್ಲಿ ಸ್ನೇಹದ ಸುಖ ಕಾಣಲಾರ. ಸ್ನೇಹಿತನು, ಸಂಗಾತಿಯು, ಕೊಡುವ ಸುಖ ಏಕಾಂತವಾಸದಲ್ಲಿ ಸಿಗಲಾರದು. ಅಂದು ತನ್ನ ತಂದೆಯನ್ನಗಲಿದ ದಿನ ಬಳಗದವನಾದ ಗೋಪಾಲರಾಯನಿದ್ದರೂ ಸ್ವಲ್ಪೇ ಪರಿಚಯಸ್ಥನಾದ ಪ್ರಭಾಕರನು ಹೆಚ್ಚು ಹತ್ತಿರದವನಂತೆ ಅವಳಿಗೆನಿಸಿತು. ಅವನಲ್ಲಿ ವಿಶ್ವಾಸ ಬೇರೂರಿತ್ತು. ತಂದೆಯ ಸಾವಿನಿಂದ ತೆರವಾದ ಅವಳ ಪ್ರೇಮ ರಾಜ್ಯದಲ್ಲಿ ಪ್ರಭಾಕರನಿಗೆ ಸ್ಥಾನಕೊಟ್ಟರೇನು ತಪ್ಪು ಎಂದೆನಿಸಿತು. ಕಷ್ಟ ಕಾಲದಲ್ಲಿ ಸಹಾನುಭೂತಿ ತೋರಿದವನೇ ಆಪ್ತನಲ್ಲವೆ? ಆ ಸಹಾಯ ಕಾಂತ—ಪ್ರಭಾಕರನಿಂದ ದೊರೆತಿಲ್ಲವೆ? ಪ್ರಭಾಕರನು ಅನಂತರ ತನ್ನ ವರ್ತನೆಯ ಮೂಲಕ ಮೊದಲೇ ನೆಲೆ

ಗೊಂಡಿದ್ದ ಸ್ನೇಹವನ್ನು ಬಲಪಡಿಸಿಕೊಂಡಿಲ್ಲವೆ? ತನ್ನ ಹೃದಯದಲ್ಲಿ ಅಂಕುರಿಸಿದ ಪ್ರೇಮದ ಮೊಳಕೆಗೆ ಪ್ರಭಾಕರನು ನೀರೆರೆದಿಲ್ಲವೆ?

ಪ್ರಭಾಕರನು ತನ್ನನ್ನು ಮರೆತಿರಬಹುದೆ? ಅಂಥವನಲ್ಲಿ ಮತ್ತೆ ಪ್ರೀತಿ ನೆಲೆಸಲು ಸಾಧ್ಯವೆ? ಛೆ! ಹೀಗಾಗುವುದಕ್ಕೆ ಸಾಧ್ಯವೇ ಇಲ್ಲ. ಕಾಂತ ಪ್ರಭಾಕರರು ತಮ್ಮ ಕಾಗದಗಳ ಮೂಲಕ ಹಿಂದಿನ ಸ್ನೇಹವನ್ನು ಮತ್ತೆ ಬಲಪಡಿಸಿಕೊಂಡಿದ್ದಾರೆ. ಇದರಲ್ಲೇಕೆ ಅನುಮಾನ? ಪ್ರಭಾಕರನು ಒಳ್ಳೆಯವನು. ಮಾತಿನಲ್ಲಿ ಒರಟುತನವಿದ್ದರೂ, ಅವನಲ್ಲಿ ದಯೆ ಇದೆ; ಕರುಣೆ ಇದೆ; ಹೃದಯವಿದೆ. ನಿಜವಾದ ಸ್ನೇಹಕ್ಕೆ ಎಂತಹ ತ್ಯಾಗವನ್ನಾದರೂ ಮಾಡುವ ಸಾಹಸವಿದೆ. ಅವನನ್ನು ಕುಸುಮಳು ತಿಳಿದಿದ್ದಳು.

ಯೋಚಿಸಿ, ಯೋಚಿಸಿ ಪ್ರಭಾಕರನಿಗೊಂದು ಕಾಗದ ಬರೆದಳು. ಅದನ್ನು ಪೋಸ್ಟು ಪೆಟ್ಟಿಗೆಯಲ್ಲಿ ಹಾಕಬೇಕಲ್ಲ? ಆ ಹಾಳೂರಿನಲ್ಲಿ ಟಪಾಲಾಫೀಸೆಲ್ಲಿದೆಯೋ? ಇಳಿ ಹೊತ್ತಾಗಿತ್ತು; ಹೊರಗೆ ಹೋಗಿ, ಪೋಷ್ಟಾಫೀಸಿನಲ್ಲಿ ಕಾಗದ ಹಾಕಿ, ಸ್ವಲ್ಪ ಬಯಲಿನಲ್ಲಿ ತಿರುಗಾಡಿ ಬರೋಣವೆಂದು ಬೀದಿಗೆ ಹೋದಳು. ಹೊರ ಬಿದ್ದೊಡನೆಯೇ ಎಲ್ಲರೂ ಇವಳನ್ನೇ ನೋಡುವರು ಆಶ್ಚರ್ಯದಿಂದ. ಇವರ ಆಶ್ಚರ್ಯದ ನೋಟ ಕುಸುಮಳಿಗೆ ಶಾಂತತೆಯನ್ನುಂಟು ಮಾಡಲಿಲ್ಲ. ಅಂತೂ ಪೋಷ್ಟಿನ ದಬ್ಬಿಯನ್ನು ಸಮೀಪಿಸಿ, ಬರೆದ ಕಾಗದವನ್ನದರಲ್ಲಿ ಹಾಕಿ ಊರ ಹೊರಗೆ ಹೋಗಬೇಕೆನ್ನುವುದರಲ್ಲಿ ಹಾದಿಯಲ್ಲೊಬ್ಬ ಕರೆಯತೊಣ್ಯ ಎದುರಾದ. ಇವಳನ್ನು ದುರದುರನೆ ನೋಡ ಹತ್ತಿದ. ಈ ಹಳ್ಳಿಯ ಜನರಲ್ಲಿ ನಾಗರೀಕತೆಯ ಲಕ್ಷಣಗಳೇ ಕಾಣದಿದ್ದುದು ಅವಳಿಗೆ ಅಸಹ್ಯವೆನಿಸಿತು. ಅವನನ್ನು ನೋಡಿಯೂ ಊರ ಹೊರಗೆ ಬಂದಳು.

ಅದೇ ಸೂರ್ಯನಸ್ತಮಿಸುತಿದ್ದನು. ಕುಸುಮಳು ಕೆರೆಯ ಏರಿಯ ಮೇಲೆ ನಿಂತು ಆ ದಿವ್ಯ ನೋಟದಲ್ಲಿ ಮಗ್ನಳಾದಳು. ಸಂಜೆಯ ಮಂದ ಮಾರುತ ಬೀಸುತ್ತಿರುವುದು. ನೀರಿನ ಮೇಲೆ ಹಾಯ್ದು ಬರುವ ಆ ಗಾಳಿಯಲ್ಲಿಯ ತನುವು, ದುಃಖದಿಂದ ಖತಿಗೊಂಡ ಅವಳ ಹೃದಯಕ್ಕೆ ಶಾಂತಿಯನ್ನುಂಟುಮಾಡಿದವು. ಹಳ್ಳಿಯನ್ನೆಷ್ಟು ಹಳಿದರೂ ಇಂಥಾ

ಸುಖಮಯ ಸನ್ನಿವೇಶಗಳನ್ನೊದಗಿಸುವ ಹಳ್ಳಿಯ ಜೀವನ ಸಂತೋಷ ಮಯವನ್ನಾಗಿಸುವುದು ಮಾನವನಲ್ಲಿದೆ. ಪ್ರಕೃತಿದೇವಿಯು ನೀಡುವ ಸುಖವೆಲ್ಲರಿಗೂ ಒಂದೇ. ಆದರೆ ಆ ಸುಖವನ್ನಾವ ರೀತಿಯಲ್ಲಿ ಮಾನ ವನು ಬರಮಾಡಿಕೊಳ್ಳುವನೋ, ಅಷ್ಟೇ ಪ್ರಮಾಣದಲ್ಲಿ ಸುಖವನ್ನಾಗಲಿ ದು:ಖವನ್ನಾಗಲಿ ಹೊಂದುವನು.

ಕುಸುಮಳು ಕೆರೆಯ ದಂಡೆಯ ಮೇಲೆ ಸ್ವಲ್ಪ ದೂರ ಹಾದಿ ನಡೆ ದಳು. ದಣಿದ ಹೃದಯ ಹಗುರಾಯಿತು. ನೊಂದ ಮನಸ್ಸಿಗೆ ಶಾಂತಿ ಯೊದಗಿತು. ಯೋಚನೆಗೊಳಗಾದ ಅವಳ ಹೃದಯ ಸಮಾಧಾನ ಹೊಂದಿತು. ಅಲ್ಲೇ ಸ್ವಲ್ಪ ಕಾಲ ಕುಳಿತು ಪ್ರಕೃತಿದೇವಿಯ ಚೆಲುವನ್ನು ನೋಡಿ ಆನಂದಿಸಬೇಕೆಂಬ ಇಚ್ಛೆ ಉಂಟಾಯಿತು. ಕುಳಿತಾಗ ಮತ್ತೆ ಅವಳು ಯೋಚಿಸ ತೊಡಗಿದಳು. ಇಂಥ ನಿರ್ಮಲ ಪ್ರಶಾಂತ ವಾತಾ ವರಣದಲ್ಲಿ ಬೆಳೆದ ಹಳ್ಳಿಗರ ಮನಸ್ಸೇಕೆ ಸಂಕುಚಿತವಾಗಿದೆ? ಇಷ್ಟೇಕೆ ಕಲ್ಮಷ ಹೃದಯಿಗಳಾದರೆಂಬುದು ಅವಳಿಗೆ ತಿಳಿಯಲಿಲ್ಲ.

ತಾನೊಬ್ಬಳೇ ಅಲ್ಲಿ ಕೂತಿರಲು, ಯಾರೋ ಹೊಸಬರು ಹಿಂದಿ ನಿಂದ ಬಂದಂತೆ ತೋರಿತು. ಹಿಂದೆ ತಿರುಗಿ ನೋಡಿದಳು. ಆಗಂತುಕನು ಮೆಲ್ಲಗೆ ಹತ್ತಿರ ಬಂದು "ನೀನು ಶ್ರೀಧರನ ಮಗಳಲ್ಲವೆ? ನಿನ್ನಪ್ಪ ನನಗೆ ಹಳೆಯ ಗೆಳೆಯ. ನಾನೂ ಅವನೂ ಪ್ರೈಮರೀ ವರೆಗೆ ಓದಿದೆವು. ಮುಂದೆ ನಾನು ಓದುವುದನ್ನು ಬಿಟ್ಟುಬಿಟ್ಟೆ. ನಿನ್ನ ಹೆಸರೇನು?'' ಎಂದು ಸಲುಗೆಯಿಂದ ಮಾತನಾಡಿಸಿದ. ಅವನನ್ನು ಮೇಲೆ ಕೆಳಗೇ ನೋಡಿ "ನಿಮ್ಮ ಗುರುತು ನನಗೆ ಹತ್ತಲಿಲ್ಲ''ವೆಂಬ ಅವಳ ಸಮಾಧಾನದ ಮಾತುಗಳು ಆ ಪಶುಪ್ರಾಯನಿಗೆ ಉತ್ಸಾಹವನ್ನುಂಟು ಮಾಡಿತು.

"ನನ್ನ ಹೆಸರು ಲಕ್ಷ್ಮೀನರಸಿಂಹನೆಂದು ನನ್ನ ಹೆಸರನ್ನು ಈ ಪ್ರಾಂ ತದಲ್ಲಿ ಅರಿಯದವರೇ ಇಲ್ಲ. ನನ್ನಷ್ಟು ಭೂಮಿ ಈ ಊರಲ್ಲಿ ಯಾರಿಗೂ ಇಲ್ಲ. ಈ ಊರಿನವರು ಮಹಾ ಕೆಟ್ಟ ಜನರು. ಗೋಪಾಲರಾಯನು ಇಲ್ಲಿಗೆ ನಿನ್ನನ್ನು ಕರಕೊಂಡು ಬರಬಾರದಾಗಿತ್ತು." ಎಂದು ಹೇಳಿದ.

ಕುಸುಮಳು ಇವನ ಮಾತಿನ ಕಡೆ ಗಮನ ಕೊಡಲೇ ಇಲ್ಲ. ಅವನ ಕಡೆ ನೋಡದೇ ಸುಮ್ಮನಿದ್ದಳು.

"ನಾನಿನ್ನು ಬರ್ತೀನೆ...ಆಗಾಗ್ಯೆ ಈ ಕಡೆ ಬರ್‍ತಾ ಇರು....ಏನು?– ನಾನೇನು ಹೊರಗಿನವನೆಂದು ತಿಳಿಯ ಬೇಡ" ಎಂದು ಹೇಳಿ ಗಟ್ಟಿ ಯಾಗಿ ನಕ್ಕು ಹೊರಟು ಹೋದ. ಹತ್ತಿರ ಬಂದ ಶನಿ ದೂರದಿಂದಲೇ ಹೋದುದು ಸಮಾಧಾನವೆನಿಸಿತು.

ಅಲ್ಲಿಂದೆದ್ದು ಊರ ಕಡೆ ಹೊರಟು, ಕೆರೆಯ ಕೊನೆಯಲ್ಲೊಂದು ಗಿಡದಡಿಯಲ್ಲಿ ಕೂಡಬೇಕೆಂದು ಮನಸ್ಸಾಯಿತು. ಅಲ್ಲಿ ಕುಳಿತುಕೊಂಡು ಸುಮ್ಮನೆ ಯೋಚಿಸತೊಡಗಿದಳು. ಯೋಚನೆಯಲ್ಲಿಯೇ ಹೆಚ್ಚು ಹೊತ್ತು ಕಳೆದು ಹೋಯಿತು. ಬೆಳುದಿಂಗಳಿದ್ದುದರಿಂದ ಭಯವೇನೂ ಇರಲಿಲ್ಲ. ಮನೆಗೆ ಹೋಗುವ ಹೊತ್ತಿಗೆ ಗೋಪಾಲರಾಯನು ಮನೆಯ ಮುಂದೆ ನಿಂತಿದ್ದ. ಇವಳನ್ನು ನೋಡಿ "ಎಲ್ಲಿಗೆ ಹೋಗಿದ್ದಿ? ಹೊತ್ತು ಬಹಳ ವಾಯಿತು." ಎಂದು ಕೇಳಿದ.

"ಮನಸ್ಸಿಗೆ ಬೇಸರವಾಗಿತ್ತು. ಹೊರಗೆ ಹೋಗಿದ್ದೆ. ಅಷ್ಟೇ".

"ಹುಚ್ಚೀ, ಹಾಗೆ ಹೊರಗೆ ಒಬ್ಬಳೇ ಹೋಗ್ತಾರೇನು? ಜನರೇ ನೆಂದು ಕೊಂಡಾರೆಂಬ ಭಯವೇ ಇಲ್ಲ ನಿನಗೆ? ಹಾಗೆ ಹೋಗ ಬಾರದು.

"ಜನರೇನೆಂದು ಕೊಳ್ಳುವರು? ಜನರಾಡಿಕೊಳ್ಳುವುದಕ್ಕೆ ಇದರಲ್ಲಿ ತಪ್ಪೇನಿದೆ"?

"ನಿನಗದರ ಭಯವಿಲ್ಲದಿದ್ದರೆ ನನಗೆ ಯೋಚನೆ ಇಲ್ಲವೆ? ನೀನೇನೋ ಒಬ್ಬಂಟಿಗಳು. ನನಗೆ ಮಕ್ಕಳಿವೆ. ಅವರ ಗತಿ ಏನಾಗ ಬೇಕು ಮಹಾರಾಯಳೇ? ನಿನ್ನಿಂದ ನನಗೆ ಒಳ್ಳೇ ಹೆಸರು ಬರೋ ಹಾಗಿಲ್ಲ. ಇದೇನು ನಗರವೇ ಷಿಕಾರಿಗೆ ಸ್ತ್ರೀಯರು ಹೊರಗೆ ಅಡ್ಡಾ ಡೋಕೆ? ನೀನು ಹೀಗೆ ಭಯ, ಸಂಕೋಚ, ನಾಚಿಕೆ ಬಿಟ್ಟು ಗಂಡಸ ರಂತೆ ಬೀದಿ ಬೀದಿ ಅಲೆದರೆ ಕಷ್ಟ ನನಗಾಗುತ್ತದೆ. ನಿಂದೇನು ಗಂಟು ಹೋಗ್ತದೆ? ನನಗೆಲ್ಲಾ ತಿಳಿದಿದೆ. ಕೆರೆಯ ದಂಡೆ ಮೇಲೆ ಆ ವೈರಾ ವಣ ಬೇರೇ ಗಂಟು ಬಿದ್ದಿದ್ದನಂತೆ. ಏನೇನೋ ಮಾತುಕತೆ ಆಯ್ತಂತೆ. ಆ ಫಟಿಂಗನ ಸಂಗಡ ಮಾತನಾಡಿದ ಹೆಂಗಸು ಅರ್ಥ ಕೆಟ್ಟು ಹೋದಂತೆ. ಇನ್ನೇನು, ನನ್ನ ಮಾನಮರ್ಯಾದೆ ಉಳಿಯೋ ಹಾಗಿಲ್ಲ ಈ ಊರಲ್ಲಿ".

"ಯಾಕೆ ಚಿಕ್ಕಪ್ಪ? ನಿಮ್ಮನೇಯವರು ಹೀಗೇನಾದರೂ ಮಾಡಿ

ದರೆ ನಿಮಗೆ ಅಪಕೀರ್ತಿ. ನನಗೇಕೆ ಈ ಆತಂಕ? ನನ್ನ ವರ್ತನೆ, ನಡತೆ ಚೆನ್ನಾಗಿದ್ದರೆ ಯಾರದೇನುಭಯ? ನನಗೇಕೀ ನಿರ್ಬಂಧಗಳು?"

"ಹೀಗಾಗುವುದು ಅಸಾಧ್ಯ."

"ಅದೇಕೆ? ನಾನು ಸುಧಾರಿಸಿದವಳು. ಜನರೊಂದಿಗೆ ಮಾತಾ ನಾಡಿದರೆ ನನ್ನ ನಡತೆ ಕೆಡಲಾರದು. ಇನ್ನೊಬ್ಬರೊಂದಿಗೆ ಮಾತ ನಾಡುವುದೇ ಅನೀತಿಯೆನಿಸುತ್ತದೆಯೇ ನಿಮ್ಮ ಕಾನೂನಿನಲ್ಲಿ?"

"ಏನಂದೆ?"

"ಅನ್ನುವುದೇನು ಬಂತು? ನಿಮ್ಮ ಮನೇಲಿ ನಡೆಯೋ ವ್ಯವಹಾರ ನೋಡಿದರೆ ರೀತಿ ನೀತಿಯಲ್ಲಿ ನನಗೂ ನಿಮ್ಮ ಮನೆಯವರಿಗೂ ಬೇರೇ ಎಂದೇ ಕಾಣುತ್ತದೆ. ನೀವು ತಿನ್ನುವ ಊಟ ಬೇರೆ, ನಾನುಣ್ಣುವ ಅನ್ನ ಬೇರೆ. ನೀವು ಇರುವುದು ಒಳಗೆ, ನಾನಿರುವುದು ಹೊರಗೆ. ನಿಮ್ಮ ಮಕ್ಕಳನ್ನು ನಾನು ಮುಟ್ಟಿದರೆ ಮೈಲಿಗೆ. ಮನೇಲಿ ನಾನು ಸೇರಿದರೆ ಶನಿ ಹಿಡೀತದೆ ನಿನುಗೆ. ನನ್ನಿಂದ ನಿಮಗೇಕೆ ತೊಂದರೆ? ನಾಳೆ ಮುಂ ಜಾನೆ ಹೋಗಿಬಿಡುತ್ತೇನೆ. ನಾನಿರುವುದರಿಂದ ನಿಮ್ಮ ಮನೆತನ ಹಾಳಾದೀತು ಪಾಪ! ನಾನೇ ಹೋಗ್ತೇನೆ" "ಎಲ್ಲಿಗೆ?" ಎಂದು ಗೋಪಾ ಲರಾಯನು ಆಶ್ಚರ್ಯದ ನೋಟದಿಂದ ಕೇಳಿದ.

"ನಮ್ಮ ಚಿಕ್ಕಮ್ಮನ ಹತ್ತಿರ. ನಾನು ಹೇಗಾದರೂ ಸೂಳೆಯ ಜಾತಿಯುವಳೆಂದು ತಿಳಿದು ಹೋಗಿದೆ. ಇನ್ನೇನು? ಇಷ್ಟು ದಿನ ಸಂಸ್ಕಾ ರದ ಜೀವನದಿಂದ, ಒಳ್ಳೆಯ ನಡತೆಯಿಂದ, ರೀತಿ ನೀತಿಯಿಂದ ಬ್ರಾಹ್ಮ ಣಳಾಗುವೆನೆಂದು ನೆನೆದೆ. ಬ್ರಾಹ್ಮಣಳಂತೆ ನಟಿಸಿದಂತಾಯಿತಷ್ಟೆ. ನೀವಂತೂ ನನ್ನನ್ನು ಬರಮಾಡಿಕೊಳ್ಳಲಾರಿರಿ. ಅಂದಮೇಲೆ ನಾನಾರ ಕುಲದವಳೋ ಅವರ ಹತ್ತಿರವೇ ಹೋಗುತ್ತೇನೆ" ಎಂದು ಕುಸುಮಳು ಸ್ಪಷ್ಟ ಹೇಳಿಬಿಟ್ಟಳು. ಗೋಪಾಲರಾಯ ಅವಳ ಮಾತುಗಳನ್ನು ಮುಂದೆ ಕೇಳಲಾರದೆ ಮನೆಸೇರಿ ಬಾಗಿಲು ಹಾಕಿಕೊಂಡ. ರಾತ್ರಿ ಊಟವಿಲ್ಲದೆ ಅತ್ತೂ ಅತ್ತೂ ಮಲಗಿದಳು ಕುಸುಮ.

*

೯

ಬೆಜವಾಡಾ ನಾಟಕ ಸಂಸ್ಥೆಯ ಒಡೆಯರಾದ ಕುಟುಂಬರಾಯ ನಿಗೆ, ತನ್ನ ಕಂಪೆನಿಯ ಜೀರ್ಣೋದ್ಧಾರಕ್ಕೆಂದು ಅಳಿಯ, ಮತ್ತು ಅವನ ಗೆಳೆಯ ಪ್ರಭಾಕರನು ಬಂದುದು ಬಹಳ ಸಂತೋಷವೆನಿಸಿತು.

"ನನ್ನ ಮಿತ್ರ ಸತ್ಯನಾರಾಯಣನಿಗೂ ನಿಮ್ಮಿಬ್ಬರ ಬರುವಿಕೆಯ ವಿಷಯ ತಿಳಿಸೀನಿ. ಅವನಿಗೂ ನನ್ನೀಯೋಚನೆಗೆ ಒಪ್ಪಿಗೆಯಿದೆ. ಅವನೆಂದಿಗೂ ನನ್ನ ಮಾತನ್ನು ಮೀರುವಂಥವನಲ್ಲ. ಆದರೆ ನನಗಿಂತಲೂ ಈ ಸಂಸ್ಥೆಯಲ್ಲಿ ಅವನೇ ಹೆಚ್ಚು ಹಣ ಹಾಕಿರುವನು. ಆದುದರಿಂದ ನಿವೇನು ಮಾಡಿದರೂ ಅವನ ಕಿವಿಗೆ ಹಾಕುವುದು ಒಳ್ಳೇದು. ಆದುದರಿಂದ ಸಂಜೆ ಅವನನ್ನೂ ಇಲ್ಲಿಗೆ ಬರಬೇಕೆಂದು ಹೇಳಿ ಕಳಿಸಿದ್ದೇನೆ. ಬಂದೇ ತೀರುವನು'' ಎಂದು ಕುಟುಂಬರಾಯನು ಹೇಳಿದ ಮಾತುಗಳನ್ನು ನಿಧಾನವಾಗಿ ಇವರಿಬ್ಬರೂ ಕೇಳಿಕೊಂಡರು.

ನಿಶ್ಚಯಿಸಿದಂತೆ ಸಂಜೆ ನಾಟಕ ಸಂಸ್ಥೆಯ ಮಂದಿರದಲ್ಲಿ ಇವರೆಲ್ಲರೂ ಆಪ್ತಾಲೋಚನೆಗೆಂದು ಸೇರಿದರು. ಮೊದಲೇ ಸುದ್ದಿ ಹರಡಿದ್ದರಿಂದ ಕಂಪೆನಿಯಲ್ಲಿ ಪಾರ್ಟು ಮಾಡುವ ಜನರು ಸಾಕಷ್ಟು ಮಂದಿ ನೆರೆದಿದ್ದರು. ಇವರೆಲ್ಲರೂ ಆದಷ್ಟು ವಯಸ್ಸಾದವರಂತೆ ಕಂಡುಬಂದರು. ಒಬ್ಬರಲ್ಲಾದರೂ ನೂತನ ಹುರುಪಿನ ಕಳೆಯಾಗಲಿ, ಉತ್ಸಾಹದ ಚಿನ್ಹೆಯಾಗಲಿ ಕಾಣಿಸಲಿಲ್ಲ. ನಾಯಕನ ಪಾತ್ರ ವಹಿಸುವವನ ವಯಸ್ಸು ನಾಲವತ್ತೈದು, ಮತ್ತು ನಾಯಕಿಯ ಸ್ತ್ರೀಪಾತ್ರ ಮಾಡುವವರ ವಯಸ್ಸು ಮೂವತ್ತೈದರ ಕೆಳಗಿರಲಿಲ್ಲ. ಇದೆಲ್ಲವೂ ನೋಡಿದರೆ ಪ್ರಭಾಕರನಿಗೆ ಆಶ್ಚರ್ಯವೆನಿಸಿತು. ರಂಗಭೂಮಿಯನ್ನು ಸಾಕಷ್ಟು ಸುಧಾರಿಸಬೇಕೆಂಬ ಹಂಬಲವಿದ್ದ ತಮ್ಮ ಸೂಚನೆಗಳನ್ನು ಇವರು ಸಮರ್ಥಿಸುವರೋ ಇಲ್ಲವೆಂಬ ಭಯ ತಲೆದೋರಿತು.

ಗೇಣುದ್ದ ಹುಡುಗರಂತಿರುವ ಈ ತರುಣರು ತಮ್ಮನ್ನು ಪರೀಕ್ಷೆ ಮಾಡಲು ಬಂದಿರುವುದು ಕಂಪೆನಿಯ ನಟರಿಗೆ ಅಸಹ್ಯವೆನಿಸಿತು.

ಇದೆಂಥಾ ಅವಮಾನದ ಕೆಲಸವೆಂದು ಎಲ್ಲರೂ ರೇಗಿ ಬಿದ್ದರು. ಆದರೂ ಬಿಟ್ಟು ಹೋಗುವ ಧೈರ್ಯ ಯಾರಿಗೂ ಇರಲಿಲ್ಲ. ಈ ಕಂಪೆನಿ ಬಿಟ್ಟರೆ ಬೇರೆ ಸಂಸ್ಥೆಯಲ್ಲಿ ಸೇರುವೆವೆಂಬ ಹುಮ್ಮಸವಿರಲಿಲ್ಲವಾದುದರಿಂದಲೇ ಇಲ್ಲಿ ಬಿದ್ದಿರಬೇಕಾಗಿತ್ತು. ಹುಟ್ಟಿದಾರಭ್ಯ ನಾಟಕದಲ್ಲಿ ಮಾತ್ರ ಪಾತ್ರ ವಹಿಸುತ್ತ ಬಂದಿರುವುದರಿಂದ ಇನ್ನಾವ ಕೆಲಸದಲ್ಲಿ ತೊಡಗಲು ಅವರಿಗೆ ಅನುವು ಇರಲಿಲ್ಲ. ಪಾಪ, ಅವರ ಪರಿಸ್ಥಿತಿ ಬಹಳ ಶೋಚನೀಯವಾಗಿತ್ತು.

"ಯಾವುದಾದರೊಂದು ಸೀನು ಸ್ವಲ್ಪ ರಿಹರ್ಸು ಮಾಡಿರಿ ನೋಡುವ" ಎಂದು ಸೂಚಿಸಿದ ಕಾಂತ.

ಗಯೋಪಾಖ್ಯಾನದಿಂದಲೂ, ಹರಿಶ್ಚಂದ್ರ, ಸತ್ರಾಜಿತ ಚರಿತ್ರೆ, ಇವುಗಳೊಳಗಿನ ಒಂದೊಂದು ಸೀನು ಆಡಿ ತೋರಿಸಿದರು. ಕಾಂತ—ಪ್ರಭಾಕರರಿಗೆ ಇವರ ಪ್ರದರ್ಶನ ಸಮುವೆನಿಸಲಿಲ್ಲ.

"ಇದೇನೂ ಪ್ರಯೋಜನವಿಲ್ಲ. ಹೀಗೆ ನಾವು ಹಿಂದುಳಿದರೆ ನಮ್ಮ ಕಂಪನಿಯ ನಾಟಕಗಳನ್ನು ನೋಡಲು ಯಾರು ಬರುವರು? ಕಾಲವು ಬದಲಾದಂತೆ ನಾವೂ ಬದಲಾಗಬೇಕು. ನಮ್ಮ ನಾಟಕದ ವಸ್ತು, ರೀತಿ, ಇನ್ನಿತರ ವಿಷಯಗಳು ಬದಲುಗೊಳ್ಳಬೇಕು. ಇಂತಹ ಹಳೆಯ ತರಹದ ನಾಟಕಗಳನ್ನು ಆಡಿದರೇನು ಪ್ರಯೋಜನ?" ಎಂದು ಸ್ಪಷ್ಟ ಹೇಳಿ ಬಿಟ್ಟ ಕಾಂತರಾಯ.

ಹೊಸ ನಾಟಕದ ರೀತಿ ಹೇಗಿರಬೇಕು, ನಟನೆಯ ಲಕ್ಷಣವೇನೆಂಬುದನ್ನು ಸ್ಪಷ್ಟಗೊಳಿಸಲು ಕೆಲವು ಹೊಸ ನಾಟಕದಲ್ಲಿಯ ದೃಶ್ಯಗಳನ್ನು ತಾವಿಬ್ಬರೇ ಆಡಿ ತೋರಿಸಿದರು.

ಪ್ರಧಾನ ನಾಯಕ ಪಾತ್ರ ವಹಿಸುತ್ತಲಿದ್ದವನಿಗೆ ಕೋಪ ಹೆಚ್ಚಿತು. "ನಿಮ್ಮ ಮಾತಿಗೆ ವಿರೋಧವಾಗಿ ಮಾತನಾಡುತ್ತೇನೆಂದು ಕೋಪಿಸಿಕೊಳ್ಳಬೇಡಿ. ನನಗೂ ರಂಗಭೂಮಿಯ ಪರಿಚಯ ಇಪ್ಪತ್ತು ವರುಷಗಳಿಂದ ಇದೆ. ಆದರೆ ನೀವು ದೃಷ್ಟಾಂತಕ್ಕೆಂದು ನಿರೂಪಿಸಿದ ದೃಶ್ಯಗಳನ್ನು ಜನರು ನಾಟಕವೆಂದು ತಿಳಿಯುವುದಿಲ್ಲ" ಎಂದು ಹೇಳಿದ.

ಕಾಂತರಾಯನು "ಅಹುದು, ಈ ವಿಷಯದಲ್ಲಿ ನಾವೀಗ ಕೆಲವು ಮುಖ್ಯ ವಿಷಯಗಳನ್ನು ಗಮನಿಸಬೇಕಾಗಿದೆ. ನಟ ತಾನು ರಂಗ

ಭೂಮಿಯ ಮೇಲೆ ಬೇರೊಬ್ಬರ ಪಾತ್ರ ವಹಿಸಿರುವೆನೆಂಬ ಭಾವನೆ ಬರುವಂತೆ ಮಾಡಬಾರದು. ನನ್ನ ಸ್ನೇಹಿತನು ಕನ್ಯಾಶುಲ್ಕದಲ್ಲಿಯ ಗಿರೀಶನ ಪಾತ್ರವನ್ನು ಮಾಡುವಾಗ, ಗಿರೀಶನೆಂಬ ಮನುಷ್ಯನು ಜೀವಂತವಿದ್ದಿದ್ದರೆ ಎಷ್ಟು ನಿಜವಿರಬೇಕೋ ಆ ವಾಸ್ತವ್ಯತೆಯ ಅನುಭವ ನೋಡುವವರಿಗೆ ಆಗುತ್ತದೆ. ನಟನೆಯಲ್ಲಿ ನಾವು ಮನಸ್ಸಿನಲ್ಲಿಡಬೇಕಾದ ವಿಷಯವಿದು. ಯಾವ ತರಹದ ಕಾಲ್ಪನಿಕತೆ ಕೃತ್ರಿಮತೆ ಇರಬಾರದು. ಮಾಡುವ ಪಾರ್ಟಿನ ಲಕ್ಷಣ, ಆಡುವ ಮಾತಿನಲ್ಲಿಯ ಅರ್ಥವನ್ನು ಹೆಚ್ಚು ಶ್ರದ್ಧೆಯಿಂದ ತಿಳಿದು ನಟಿಸಿದರೆ ಅಸಹಜತೆ ಬರಲಾರದು. ಹಾಡುವುದೂ ಇದೇ ತರಹದ್ದೇ ಇರಬೇಕು. ಬೇಕಾದರೆ ನೀವು ಗಮನಿಸಬಹುದು" ಎಂದು ಹೇಳುತ್ತ ಪ್ರಭಾಕರನನ್ನು ಕೆಲವೊಂದು ಹಾಡುಗಳನ್ನು ಹಾಡೆಂದು ಕೇಳಿಕೊಂಡನು.

ಪ್ರಭಾಕರನ ಹಾಡುಗಳು ಭಾವಗೀತೆಗಳಾಗಿದ್ದುವು. ಅವುಗಳಿಗೆ ಐಕ್ಯ ವಾದ್ಯಗಳ ಅವಶ್ಯಕತೆ ಇರಲಿಲ್ಲ. ಪ್ರಭಾಕರನು ತಾನೇ ಹಾರ್ಮೋನಿಯಂನ್ನು ನುಡಿಸಿ ಹಾಡಿದ. ಅವನ ಧ್ವನಿಯಲ್ಲಿದ್ದ ಮಾಧುರ್ಯ ಅರಿಸಿದ ಸಂಗೀತದ ಸರಳ ರೀತಿ, ಹಾಡಿನಲ್ಲಿಯ ವಾಕ್ಯಗಳ ಸ್ಪಷ್ಟತೆ,ಎಲ್ಲವೂ ಹೊಂದಿಕೊಂಡಿದ್ದವು. ಆ ಹಾಡನ್ನು ಕೇಳಿ ಬೆರಗಾದರು. ತಬಲಜೀಯಂತೂ ಪರವಶನಾಗಿದ್ದನು.

ಹಳೆಯ ಕೆಲಸಗಾರರೆಲ್ಲರೂ ನಿರುತ್ಸಾಹಿಗಳಾದರು. ಮುಂದೇನಾಗುವುದೋ ಎಂಬ ಯೋಚನೆಯಿಂದ ಅವರು ಸಂಕಟಕ್ಕೊಳಗಾದರು. ಇದೆಲ್ಲವನ್ನೂ ದೂರದಿಂದಲೇ ನೋಡುತ್ತಲಿದ್ದ ಕುಟುಂಬರಾಯರಿಗೆ ಇದೇನೋ ಗೊಂದಲವೆಂಬಂತೆ ಕಂಡುಬಂತು. ಕಾಂತರಾಯನ ಸೂಚನೆಯಂತೆ ನಡೆಯಲು, ಯಶಸ್ಸು ದೊರೆಯಬಹುದೇ ಎಂಬ ಯೋಚನೆ ಇವನನ್ನು ವೇದಿಸಿತು. ಏನಾದರೂ ಹೊಸ ಯೋಜನೆ ಮಾಡದೇ ಹೋದರೆ ಕಂಪನಿ ನಾಲ್ಕು ದಿನ ಉಳಿಯುವ ಸ್ಥಿತಿಯಲ್ಲಿರಲಿಲ್ಲ. ಹಿಂದಿನಂತೆ ನಡೆದರೆ ಕೀರ್ತಿಯೂ ಇಲ್ಲ, ಉತ್ಪನ್ನವಿಲ್ಲ. ಹೊಸ ವಿಧಾನ ಏನಾದರೊಂದನ್ನು ಹುಡುಕಲೇ ಬೇಕಾಗಿತ್ತು. ಆದುದರಿಂದ ಕಾಂತರಾಯನ ಸೂಚನೆ ಇವರ ಮನಸ್ಸಿಗೆ ಹಿಡಿಯುವಂತಿತ್ತು. ಇವನೇನು

ಹೊಸಬನೆ? ದೂರವದನೆ? ಸಮಾಜದಲ್ಲಿ ಅನುಭವ ಉಳ್ಳವನು. ನಾಟಕದಲ್ಲಿ ಸ್ವಲ್ಪ ಪರಿಶ್ರಮವೂ ಇದೆ. ಹೀಗೆ ಹೊಸ ದಾರಿಯಲ್ಲಿ ಪ್ರಯತ್ನಿಸಿದರೆ ಯಶಸ್ಸು ದೊರೆಯಬಹುದೆಂದು ಆಶೆ. ಅಂತೂ ತಕ್ಕಡಿಯ ತೂಕ ಕಾಂತರಾಯನ ಕಡೆಗೆ ಇಳಿಯಿತು. ಕುಟುಂಬರಾಯರಿಗೂ ವಿಶ್ರಾಂತಿ ಬೇಕಾಗಿತ್ತು. ಹೀಗೆ ಮನಸ್ಸಿನಲ್ಲಿ ಯೋಚಿಸುತ್ತಿರುವಾಗ ಕಾಂತರಾಯನು "ಜನಪ್ರಿಯವಾಗುವಂತೆ ನಾಟಕಗಳನ್ನಾಡಬೇಕಾದರೆ, ಈಗ ನಮ್ಮ ಕಂಪನಿಯಲ್ಲಿ ಅನೇಕ ಬದಲಾವಣೆಗಳಾಗಬೇಕಾಗಿದೆ. ಸನ್ನಿವೇಶಕ್ಕನುಸರಿಸಿ, ದೀಪಗಳ ವ್ಯವಸ್ಥೆ ಇರಬೇಕು. ಈ ಗೊಡ್ಡು ಗ್ಯಾಸು ಲೈಟುಗಳಿಂದ ಏನೂ ಪ್ರಯೋಜನವಿಲ್ಲ. ಸಂಗೀತವು ಇಂಪಾಗಿಯೂ, ಗಂಭೀರವಾಗಿಯೂ, ಜನಾಕರ್ಷಕವಾಗಿರುವುದಕ್ಕೆ ಸಂಗೀತ ವಾದನ ಸಂಗ್ರಹ ಒದಗಿಸಲೇಬೇಕು. ಆಯಾ ನಾಟಕಕ್ಕೆ ಸಂದರ್ಭಕ್ಕನುಸರಿಸಿದ ಸೀನರಿಗಳ ಮೇಲೆ ಹಣ ವೆಚ್ಚ ಮಾಡಬೇಕು. ನನ್ನನ್ನು ನಂಬಿ ಇಷ್ಟು ಹೆಚ್ಚು ಹಣವಿದರಲ್ಲಿ ಈಗಲೇ ಹಾಕಬೇಕೆಂದು ನನ್ನ ಒತ್ತಾಯವಲ್ಲ. ನಮಗಿರುವ ಸದ್ಯದ ಪರಿಸ್ಥಿತಿಯಲ್ಲಿ ಸ್ವಲ್ಪದರಲ್ಲಿಯೇ ಜನಪ್ರಿಯವಾದ ನಾಟಕಗಳನ್ನು ಪ್ರದರ್ಶಿಸುವ. ನಾಟಕವನ್ನು ನಾನೇ ಬರೆಯುತ್ತೇನೆ. ಹಾಡುಗಳನ್ನು ನನ್ನ ಮಿತ್ರ ಪ್ರಭಾಕರನು ಒದಗಿಸಿ, ಅದನ್ನು ಪ್ರದರ್ಶಿಸುವ ಭಾರ ಅವನು ವಹಿಸುವನು. ಆದಷ್ಟು ಮಿತವ್ಯಯದಿಂದ ನಮ್ಮ ಕೆಲಸದಲ್ಲಿ ಮುಂದುವರಿಯುವ. ಮೊದಲಿಗೆ ಸ್ವಲ್ಪ ಕಷ್ಟವಾಗಬಹುದು. ಆದರೆ ಈಗಿನ ಸಮಾಜದ ಸ್ಥಿತಿಯನ್ನು ನೋಡಿದರೆ, ನಾನು ಹೇಳಿದಂತೆ ನಡೆದುಕೊಂಡರೆ, ಐದಾರು ತಿಂಗಳಲ್ಲಿ ನಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಬಹುದು. ಆ ನಂತರ ನಿಮಗೆ ಧೈರ್ಯವೆನಿಸಿದರೆ, ಮುಂದೆ ನಮ್ಮ ಸಲಹೆಗಳಿಗೆ ಉತ್ತೇಜನ ಕೊಡಿ. ಇಲ್ಲವಾದರೆ ಬಿಟ್ಟೂ ಬಿಡಬಹುದು. ನಮ್ಮ ದಾರಿ ನಮಗೆ ಇದ್ದೇ ಇದೆ" ಎಂದು ದೊಡ್ಡ ಲೆಕ್ಚರ್ ಹೊಡೆದ ಕಾಂತರಾಯ.

ತಮ್ಮ ಮುಂದೆ ಹುಟ್ಟಿ ಬೆಳೆದ ಹುಡುಗ ಕಾಂತನಿಷ್ಟು ಬುದ್ಧಿಶಾಲಿಯಾಗುವನೆಂದೆನಿಸಿರಲಿಲ್ಲ ಕುಟುಂಬರಾಯ. ರಂಗಭೂಮಿಯನ್ನು ಸುಧಾರಿಸಿ ಜನರಿಗೆ ಬೇಕಾದ ನಾಟಕ ಸಾಹಿತ್ಯವನ್ನೊದಗಿಸುವ ಕರ್ತವ್ಯ

ದಲ್ಲಿ ಇವರಿಬ್ಬರಿಗಿದ್ದ ಮುನ್ನೋಟಕ್ಕೆ ಮೆಚ್ಚಿದ. ಇವರಿಬ್ಬರ ನೇತೃತ್ವ ದಲ್ಲಿ ಚೀರ್ಣಾವಸ್ಥೆಯಲ್ಲಿರುವ ನಾಟಕ ಸಂಸ್ಥೆ ಜೀವ ಕಳೆಯನ್ನು ಪಡೆಯಬಹುದೆಂದು ನೆನೆದ. ಅವರ ಸೂಚನೆಯಲ್ಲಿದ್ದ ಸ್ಪಷ್ಟತೆಗೆ ಯಾವ ಭಿನ್ನಾಭಿಪ್ರಾಯವಿಲ್ಲದಿದ್ದುದರಿಂದ ಕುಟುಂಬರಾಯರೂ, ಸತ್ಯನಾರಾಯಣರಾಯರೂ ಒಮ್ಮತದಿಂದ ಅವರಿಬ್ಬರ ಕೈಯಲ್ಲಿ ಕಂಪೆನಿಯನ್ನು ಒಪ್ಪಿಸಲು ನಿಶ್ಚಯಿಸಿದರು. ಸರ್ವ ಸ್ವಾತಂತ್ರ್ಯವನ್ನವರಿಗಿತ್ತರು.

ಹೀಗೆ ತಮ್ಮ ಯೋಚನೆ ಸರಿಯೆಂದು ನಿರ್ಣಯಿಸಲ್ಪಟ್ಟು ಕಂಪನಿಯು ತಮ್ಮ ಸ್ವಾಧೀನವಾದುದು ಕಾಂತ, ಪ್ರಭಾಕರರಿಗೊಂದು ಸುಸಂಧಿ ದೊರೆತಂತಾಯಿತು. ರಂಗಭೂಮಿಯ ಸೇವೆಮಾಡಿ, ಆದರ ಅಂತಸ್ತನ್ನುಹೆಚ್ಚಿಸಿ ರಂಗಭೂಮಿಯ ಸೇವೆಯೇ ಜನಾರ್ದನ ಸೇವೆಗೆ ಮುಖ್ಯವಾದ ಮಾರ್ಗವೆಂದು ಜನರಿಗೆ ತಿಳಿಸಲು, ಅನುವು ದೊರೆತುದಕ್ಕೆ, ಅವರಿಗೆ ಅಪಾರ ಆನಂದವೆಸಿನಿತು.

ಇವರಿಬ್ಬರ ಕೆಲಸವು ನೆನೆದಷ್ಟು ಹಗುರಾದ ಕೆಲಸವಾಗಿರಲಿಲ್ಲ. ಕಂಪೆನಿಯ ಹೆಸರು ಕೆಟ್ಟು ಹೋಗಿತ್ತು. ಜನರು ಸರಿಯಾದ ಸಮಯಕ್ಕೆ ಬಂದು ಪಾರ್ಟು ಮನಸಾರೆ ಮಾಡುತ್ತಲಿರಲಿಲ್ಲ. ಒಡೆಯರು ಅವರ ತಿಂಗಳ ಸಂಬಳವನ್ನು ಕೊಡಲು ಹಿಂದು ಮುಂದು ನೋಡುತ್ತಿದ್ದರು. ಕಂಪೆನಿಯಲ್ಲಿ ಯಾವ ವ್ಯವಸ್ಥೆಯೂ ಇರಲಿಲ್ಲ. ಇಂಥ ಸಂದರ್ಭದಲ್ಲಿ ಇವರಿಬ್ಬರಿದನ್ನು ನಡೆಯಿಸಲು ಒಪ್ಪಿದುದು ಸಾಹಸದ ಕೆಲಸವೇ ಸರಿ. ಸುಧಾರಿಸಿದ ರೀತಿಯಲ್ಲಿ ನಾಟಕಗಳನ್ನು ಆಡಲು ತಾವಿಬ್ಬರಂತೂ ಇದ್ದೇ ಇದ್ದರು. ಯಾವುದು ಕೆಟ್ಟರೂ ತಮ್ಮ ಪಾರ್ಟುಗಳು ಕೆಡಲಾರವೆಂಬ ಧೈರ್ಯವಿತ್ತು. ಸ್ವಲ್ಪ ಎಚ್ಚರಿಕೆಯಿಂದ ಮುಂದುವರಿದಲ್ಲಿ ಮೊದಲಿಗೆ ಕಷ್ಟತರವೆನಿಸಿದರೂ ಬರಬರುತ್ತ ಸ್ಥಿತಿ ಬದಲಾಯಿಸುವುದೆಂದು ಇವರ ಪೂರ್ಣ ನಂಬಿಕೆ. ಆದುದರಿಂದಲೇ ಇಂಥ ಸಂಸ್ಥೆಯನ್ನು ವ್ಯವಸ್ಥಿತ ರೀತಿಯಲ್ಲಿ ನಡೆಯಿಸಿಕೊಂಡು ಹೋಗಲು ಒಪ್ಪಿದರು. ಇವರ ಸ್ಪಷ್ಟ ಮಾತುಗಳು ಇತರ ನಟರಿಗೂ ಹಿಡಿದಂತೆ ಕಂಡುಬಂತು. ಕಂಪೆನಿಯು ಇವರ ಆಡಳಿತದಲ್ಲಿ ಸುಧಾರಿಸಬಹುದೆಂದು ಅವರೂ ನೆನೆದರು.

ಸಂಸ್ಥೆಯು ಒಳ್ಳೆಯ ರೀತಿಯಲ್ಲಿ ನಡೆಯುಹತ್ತಿದರೆ ತಮ್ಮ ಸ್ಥಿತಿಯೂ ಅನುಕೂಲಿಸಬಹುದೆಂಬ ಆಶೆಯಿದ್ದುದರಿಂದ ಯಾವ ಬಗೆಯ ವಿರೋಧವನ್ನೂ ಸೂಚಿಸದೆ ಸುಮ್ಮನಿದ್ದು ಬಿಟ್ಟರು. ಈ ಬಗೆಯ ನಿರ್ಣಯದಿಂದ, ಮುಂದೆ ಕಂಪೆನಿಯನ್ನು ಜೀವಂತ ಉಳಿಸಲು ಯಾವ ಬಗೆಯ ತೊಂದರೆಗಳಿವುರು ಬಾರದಿದ್ದುದು ಇವರ ಸುದೈವ.

ಮಾರನೆಯ ದಿನ ಕುಸುಮಳಿಗೆ ಎಲ್ಲ ವಿವರಗಳಿಗೆ ಪತ್ರಬರೆದರು. ತಮ್ಮ ಹೊಸ ಯೋಜನೆಯ ವಿವರಗಳೆಲ್ಲವನ್ನು ವಿಶದೀಕರಿಸಿ, ಮುಂದೆ ಈ ಹೊಸ ವಿಳಾಸಕ್ಕೆ ಪತ್ರಗಳನ್ನು ಬರೆಯುಬೇಕೆಂದು ಸೂಚಿಸಿದರು. ಅನುಕೂಲವಾದರೆ ಎರಡು ದಿನ ಬಂದು ಹೋಗಬೇಕೆಂದು ಇವರು ಆಮಂತ್ರಿಸಿದ್ದರು.

ಇವರ ಯೋಚನೆ ಒಂದಾದರೆ, ದೈವದ ಯೋಚನೆ ಬೇರೊಂದು ಬಗೆಯುದಾಗಿದ್ದಿತು. ಕುಸುಮಳು ಅದೇ ನಗರದಲ್ಲಿ, ಕಂಪನಿಯ ಮನೆಯ ಹಿಂಭಾಗದಲ್ಲಿಯ ತನ್ನ ಚಿಕ್ಕಮ್ಮನ ಮನೆಗೆ ಬಂದು ಎರಡು ದಿನಗಳಾಗಿದ್ದಿತೆಂದು ಅವರಿಗೆ ತಿಳಿದಿರಲಿಲ್ಲ. ಅವಳ ಚಿಕ್ಕಮ್ಮ ಅನಸೂಯಳನ್ನೊಬ್ಬ ವ್ಯಾಪಾರಸ್ಥ ಸಿಟ್ಟುಕೊಂಡು, ಅವಳಿಗಾಗಿ ಎರಡಂತಸ್ತಿನ ಮನೆಯನ್ನು ಕಟ್ಟಿಸಿ ಕೊಟ್ಟಿದ್ದನು.

ಅನಸೂಯೆ ಕುಸುಮಳನ್ನು ಕೇವಲ ಸಣ್ಣವಳಿದ್ದಾಗ ನೋಡಿದ್ದಳಂತೆ. ಆದರೆ ಕುಸುಮಳು ಮನೆಗೆ ಬಂದುದು ಅವಳಿಗಾವ ವಿಧದಲ್ಲಿಯೂ ತೊಂದರೆ ಎನಿಸಲಿಲ್ಲ. ಪ್ರೀತಿಯಿಂದ ಕಾಣುತ್ತಿದ್ದಳು. ಎಷ್ಟೋ ಆದರದಿಂದ ನೋಡಿಕೊಳ್ಳುತ್ತಿದ್ದಳು. ಕುಸುಮಳು ಸುಸಂಸ್ಕೃತದ ಹದ್ದಿನಲ್ಲಿ ಬೆಳೆದ ಸುಶಿಕ್ಷಿತ ಹುಡುಗಿ. ಆಚಾರ ಅನಾಚಾರಗಳೇನೆಂಬುದನ್ನು ಕಂಡ ಸರಳ ಹೃದಯಳು. ಅಸಡ್ಡೆ, ಅವ್ಯವಹಾರಗಳನ್ನು ಪ್ರೀತಿಸುತ್ತಿರಲಿಲ್ಲ. ನಡೆತೆಯಲ್ಲಿ ಒಳ್ಳೆಯ ರೀತಿಯುವಳಾದ ಕುಸುಮಳಿರುವುದಕ್ಕೆ ತನ್ನ ಮನೆ ಯೋಗ್ಯವಾದುದಲ್ಲವೆಂದೂ, ಅವಳು ಬಹಳ ದಿನ ತಮ್ಮ ಮನೆಯಲ್ಲಿರಲಾರಳೆಂದೂ ಊಹಿಸಿದ್ದಳು. ಆದರೆ ಈ ನಿರ್ಣಯ ಹೊರಗೆ ಮಾತ್ರ ಯಾರಿಗೂ ಹೇಳಿರಲಿಲ್ಲ. ಅನಸೂಯೆ ಮಾಡುವ ಊಟ, ಆಡುವ ಮಾತು, ಇರುತ್ತಿದ್ದ ರೀತಿ, ಕುಸುಮಳಿಗೆ ಅಸಹ್ಯವೆನಿಸಿತು. ಇವಳಿಗೆ ಯಾವುದೂ ರುಚಿಸಲಿಲ್ಲ.

ಕುಸುಮಳಿಗೆ ಚಿಕ್ಕಪ್ಪನ ಮನೆ ಯಾವ ವಿಧದಲ್ಲಿ ಸೆರೆಮನೆ ಯೆಂತಿತ್ತೋ, ಅದೇ ರೀತಿಯಲ್ಲಿ ಅನಸೂಯಳ ಮನೆಯೂ ಬೇಸರವೆನಿಸಿತಲ್ಲದೆ, ಅಲ್ಲಿ ಜೀವಿಸುವುದು ಇವಳಿಗೆ ಕಷ್ಟಕರವೆನಿಸಿತು. ಹೊರಗೆ ಬಂದು ನಿರಾತಂಕವಾಗಿ ನಾಲ್ಕು ಮಂದಿಯೊಂದಿಗೆ ಮಾತನಾಡಲು, ಇವಳಿಗೆ ಬೇಕೆನಿಸುತ್ತಿರಲಿಲ್ಲ. ಚಿಕ್ಕಮ್ಮನ ಮನೆಗೆ ಬಂದು ಹೋಗುವ ಜನರನ್ನು ಕಂಡರೆ ಅವಳಿಗೆ ಬೆಂಕಿ. ಯುವತಿಯರಾರಾದರೂ ಹೊಸಬರು ಕಣ್ಣಿಗೆ ಬಿದ್ದರೆ, ಅವರ ಮಾನಾಪಹಾರಮಾಡಿ, ಇಲ್ಲವೆ, ತಮ್ಮಲ್ಲಿಯ ಹಣದಿಂದ ಒಂದೆರಡು ರಾತ್ರಿಗಳಿಗೆಂದು ಅವರನ್ನು ಬೆಲೆಗೆ ಕೊಂಡುಕೊಂಡು, ನೀಚ ವೃತ್ತಿಯಲ್ಲಿರುವುದೇ ಇವರ ಕೆಲಸವಾಗಿತ್ತು. ಇಂಥವರ ಸಹವಾಸ ಮಾಡುವುದು ಹೇಗೆ? ಹೊರಗೆ ಹೋಗಲು ಸ್ವಾತಂತ್ರ್ಯವಿದ್ದರೂ ಹೋಗಲಾರದಂಥಾ ಮಾನಸಿಕ ಸಂಕಟ. ಆದುದರಿಂದ ಅನಸೂಯಳ ಮನೆ ಸಂಕಟದ ಮಂದಿರವಾಗಿತ್ತೆಂದು ಹೇಳಬಹುದು.

ಕುಸುಮಳು ತನ್ನ ನಿಜಸ್ಥಿತಿಯನ್ನು ಕಂಡು ಮರುಗಿದಳು. ಏಕೋ ನಗುಬಂತು; ನಕ್ಕುಬಿಟ್ಟಳು. ಸಮಾಜದಲ್ಲಿ ತನಗಾವ ಸ್ಥಾನವಿದೆಯೆಂಬುವುದು ಅವಳಿಗೆ ತಿಳಿದಿತ್ತು ತನ್ನವರೆಂಬವರೊಡನೆ ಇರಲು ಅವಕಾಶವಿರಲಿಲ್ಲ. ಕೀಳು ಜಾತಿಯುವಳೆಂದು ಒಂದು ಮನೆಯವರು ತನ್ನನ್ನು ಅವಹೇಳನ ಮಾಡುತ್ತಿರುವರು. ಇನ್ನೊಂದು ಮನೆಯಲ್ಲಿ, ಕುಸುಮಳನ್ನು ತನ್ನಂತೆ ಕೆಟ್ಟ ಜಾತಿಗೆ ಎಳೆಯುದೇ ಒಳ್ಳೇಯ ಜಾತಿಯುವಳೆಂದು ಮರ್ಯಾದಿಸಲ್ಪಟ್ಟಿರುವಳು. ಹೀಗಾದರೂ ನಿರ್ಭಯವಾಗಿ, ಯಾರ ಹಂಗೂ ಇಲ್ಲದೆ ಇರುವ ಸ್ವತಂತ್ರತೆ ಇವಳಿಗೆ ಇಲ್ಲದಿರುವುದು ಯೋಚನೆಯ ವಿಷಯವಾಗಿತ್ತು; ಬಗೆಹರಿಯದ ತೊಡಕಾಗಿತ್ತು.

ಚಿಕ್ಕಮ್ಮನ ಮನೆಯಲ್ಲಿ ಕುಸುಮಳು ಇರುವುದು ಕಷ್ಟವೆನಿಸಿತು. ತನ್ನ ಇರುವಿಕೆಯಿಂದ ಚಿಕ್ಕಮ್ಮನಿಗೆ ತೊಂದರೆಯೆಂದು ತಿಳಿದಳು. ಅಕ್ಕಪಕ್ಕದ ಮನೆಯುವರು ಬಂದರೂ ಇವಳು ತನ್ನ ಕೋಣೆಗೆ ಓಡಿ ಹೋಗಿ ಮರೆಯಾಗಿರಬೇಕಾಗಿತ್ತು. ಹೀಗೆ ಪ್ರತಿದಿನವೂ ಅನೇಕ ಸಲ ಮಾಡುವುದು, ತನಗಾಗಿ ಮನೆಯ ಬಾಗಿಲು ಯಾವಾಗಲೂ ಮುಚ್ಚಿಡುವುದು ಬೇಡವಾದ ಕೆಲಸವಾಗಿದ್ದಿತು; ಹೀಗೆ ಚಿಕ್ಕಮ್ಮನನ್ನು ತೊಂದರೆಗೀಡು

ಮಾಡುವುದು ಅವಳಿಗೆ ಬೇಡೆನಿಸಿತು. ತನ್ನಿಂದ ಇನ್ನಿತರರಿಗೇಕೆ ತೊಂದರೆ? ಹೀಗೆ ಯೋಚನೆಯಲ್ಲಿ ಅನೇಕ ಸಲ ಏನೇನನ್ನೋ ಮಾಡಲು ಯತ್ನಿಸಿದಳು.

ಇಲ್ಲಿಯ ವರೆಗೆ ವೇಶ್ಯಾವೃತ್ತಿಯ ಕಲ್ಪನೆ ಕುಸುಮಳಿಗಿರಲಿಲ್ಲ. ಚಿಕ್ಕಮ್ಮನ ಮನೆಗೆ ಬಂದೊಡನೆಯೆ ಅವರ ಜೀವನದ ರಹಸ್ಯವೇನೆಂಬುದು ತಿಳಿಯ ಹತ್ತಿತು. ಈ ವೃತ್ತಿಯು ಕೇವಲ ಹಣ ಸಂಪಾದನೆಯ ಆಶೆಯಿಂದ ನಡೆಯುತ್ತಿರುವುದೆಂದು, ಇಂಥ ಜಾತಿಯ ಜನರ ಆರ್ಥಿಕ ಜೀವನ ಸುಧಾರಿಸಿದರೆ, ಮುಂದೆ ಅಂಥ ಜೀವನ ನಡೆಯಲು, ಅವರೇ ಹೀನವೆಂದು ತಿಳಿದು ಸಾಮಾನ್ಯ ಕುಟುಂಬಿಗಳಂತೆ ವರ್ತಿಸಲು ಪ್ರಯತ್ನಿಸುವರೆಂದು ತಿಳಿದು ಬಂತು. ಇಂಥ ತಿಳುವಳಿಕೆ ನಾಗರಿಕತೆಯು, ಸುಧಾರಣೆಯು, ಲಕ್ಷಣವೆಂದು ಕುಸುಮಳಿಗೆ ಮನವರಿಕೆಯಾಯಿತು, ಇಂಥ ಜಾತಿಯ ಸ್ತ್ರೀಯರು, ಕುಲೀನ ಸ್ತ್ರೀಯರಂತೆ ಜೀವಿಸಲು ಇಷ್ಟಪಡುವುದರಿಂದ, ಈ ಕುಲವೇ ಅಳಿಯುವ ಕಾಲಬರಬಹುದೆಂದು ಯೋಚಿಸಿದಳು. ಈ ಬಗೆಯ ವೃತ್ತಿ, ಕುಲ ಆಚಾರಗಳಿಲ್ಲದ ಪಾಶ್ಚಾತ್ಯ ದೇಶಗಳಲ್ಲಿ ಇದು ಅನೀತಿ ಎಣಿಸಿಕೊಳ್ಳುವುದಿಲ್ಲವಾದರೂ, ಹಿಂದೂ ದೇಶದಲ್ಲಿ, ಇದು ತಪ್ಪೆನಿಸುವುದು. ಹೀಗೆ ಈ ವೃತ್ತಿಯನ್ನು ವ್ಯವಸಾಯವೆಂದು ನಡೆಯಿಸಿಕೊಂಡು ಬಂದಿರುವ ಜನರ ಗುಂಪಿಗೆ, ತಾನು ಸೇರಿದವಳೆಂದು ಕುಸುಮಳಿಗೆ ಮನವರಿಕೆಯಾದಾಗ ಬಹಳ ನೋವಾಯಿತು. ತನ್ನ ಅಬಚಿಯಾದ ಅನಸೂಯೆ ಎಲ್ಲ ವಿಧದಲ್ಲಿಯೂ ದಯೆ ತೋರುತ್ತಿರುವಳು. ಆದರೂ ಕುಸುಮಳಿಗೆ ನೆಮ್ಮದಿಯೆನಿಸಲಿಲ್ಲ. ತಾನವಳ ಅಕ್ಕನ ಮಗಳಾದರೂ, ಹತ್ತಿರದವಳಾದರೂ, ಮನಸ್ಸೇತಕ್ಕೋ ಸಂಕೋಚದ ಸ್ಥಿತಿಯಲ್ಲಿತ್ತು. ಕುಸುಮಳ ಮಾನಸಿಕ ಹೊಯ್ದಾಟದ ರೀತಿಯನ್ನು ಸೂಕ್ಷ್ಮ ವಿಧದಲ್ಲಿ ತಿಳಿದಿದ್ದ ಅನಸೂಯೆಯು ಎಲ್ಲ ಸ್ವಾತಂತ್ರ್ಯವನ್ನು ಅವಳಿಗೆ ಕೊಟ್ಟಿದ್ದಳು. ದಿನವೂ ಯೋಚನೆಯಲ್ಲಿ ಕಳೆಯುತ್ತಿತ್ತೇ ಹೊರತು ಬಗೆ ಹರಿಯುವ ಹಾದಿ ಕಾಣಲಿಲ್ಲ. ಚಿಂತಿಸಿ, ಚಿಂತಿಸಿ, ಮನದೊಳಗೆ ಮರುಗಿದಳು; ಕುಸುಮಳು ಚಿಂತಿಸಿ ಬೆಂಡಾದಳು.

ಅನಸೂಯಳು ಬಡವಳಲ್ಲ; ಸಾಕಷ್ಟು ಆಸ್ತಿ ಇತ್ತು. ಅವಳಿಗೆ

ಮಕ್ಕಳಿರಲಿಲ್ಲ. ಒಂದು ಹೆಣ್ಣನ್ನು ಸಾಕಿದ್ದಳು. ಆದರೆ ಆ ಸಾಕು ಮಗಳು ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ವಿಷಮ ಜ್ವರಕ್ಕೆ ತುತ್ತಾದಳು. ಶ್ರೀಮಂತಳಾದುದರಿಂದ ವ್ಯಭಿಚಾರದ ವೃತ್ತಿ ಬಿಟ್ಟರೂ ನಡೆಯುತ್ತಿತ್ತು. ಆದರೆ ಅವಳಲ್ಲಿ ಯಾವ ಬಗೆಯ ಬದಲಾವಣೆ ಕಂಡುಬರಲಿಲ್ಲ ಈ ವೇಶ್ಯವೃತ್ತಿ ಮಾಡುವುದರ ನಿಜವಾದ ಅರ್ಥವೇನೆಂಬುದನ್ನು ತಿಳಿಯಲು ಕುಸುಮಳು ತಾನಿದ್ದಲ್ಲಿಂದಲೇ ಪ್ರಯತ್ನಿಸಿದಳು. ಇದರಲ್ಲಿ ಹೆಚ್ಚು ಶಾರೀರಕ ಸುಖವಿದೆಯೆಂದರೆ ಅದು ನಂಬಲಾಗದ ಮಾತು. ಈ ವೃತ್ತಿಯಲ್ಲಿ ಪ್ರೀತಿಗಾಗಲಿ, ಪ್ರೇಮಕ್ಕಾಗಲಿ ಸ್ಥಾನವೇ ಇರಲಿಲ್ಲ. ಇದರಿಂದ ಅವರ ಆರ್ಥಿಕ ಸ್ಥಿತಿಯೂ ಬಹಳ ಶೋಚನೀಯ ರೀತಿಯಲ್ಲಿತ್ತು. ಅನಸೂಯೆಯ ಮನೆಯ ಎದುರಿನ ಮೀನಾಕ್ಷಿ, ದಿನವೂ ಎರಡಾಣೆ, ನಾಲ್ಕಾಣೆ ಸಾಲಕ್ಕೆಂದು ಬರುವುದನ್ನು ಕಣ್ಣಾರೆ ತಾನು ನೋಡಿದ್ದಳು. ಇದೆಲ್ಲವನ್ನೂ ನೋಡಿ, ಅವಳಿಗೆ ಈ ತರಹದ ವೃತ್ತಿಯಲ್ಲಿ ಮತ್ತು ಇಂಥ ಜನರಲ್ಲಿ ಅಸಹ್ಯ ಹೆಚ್ಚಿತು.

ವೇಶ್ಯೆಯರು ಮತ್ತು ಅವರ ಬಗ್ಗೆ ಒಂದು ಗ್ರಂಥವನ್ನು ಬರೆಯುವಷ್ಟು ಸಾಮಗ್ರಿ ಕುಸುಮಳಿಗೆ ದೊರೆಯಿತು. ಇವರಲ್ಲಿ ಅನೇಕ ರೀತಿಯ ಜನರಿದ್ದರು. ವಿದ್ಯಾವಾಸನೆಯಿಲ್ಲದೆ ಪರಂಪರಾಗತವಾಗಿ ನಡೆದು ಬಂದ ವೃತ್ತಿಯನ್ನು ನಡೆಯಿಸಿಕೊಂಡು ಹೋಗುವ ಸಂಪ್ರದಾಯವಂತರು ಕಲವರು. ಓದು ಬರೆಹ ಕಲಿತು ನಿರ್ವಾಹವಿಲ್ಲದೆ, ಹೊಟ್ಟೆ ಹೊರೆದುಕೊಳ್ಳುವ ನೆವದಿಂದ ವೃತ್ತಿಯಲ್ಲಿದ್ದು, ಮನಸಾರೆ ತಾವು ಪ್ರೀತಿಸದವರಲ್ಲಿ ಪ್ರೀತಿಯಿಂದ ನಡೆದುಕೊಂಡು ಜೀವನ ನಡೆಸುವ ರೀತಿಯವರು ಮತ್ತೊಂದು ಜಾತಿಯವರು. ಇವರಲ್ಲಿ ರೂಪ, ವಿದ್ಯೆ ಎರಡೂ ಇದ್ದವರಿಗೆ ಸ್ವಲ್ಪಕಾಲ ಗೆಲುವು ದೊರಕಿದರೂ, ಈ ಸಂಪಾದನೆ ಕಡೆಯ ವರೆಗೂ ಉಳಿಯದಂತಹದೆಂದು ಕುಸುಮಳು ತಿಳಿದಿದ್ದಳು. ಇದು ಬಹಳ ಕಷ್ಟ ಸಾಧ್ಯವಾದ ವೃತ್ತಿಯೆಂದು ಅವಳ ತೀರ್ಮಾನ.

ಕುಸುಮಳು ತನ್ನ ಚಿಕ್ಕಪ್ಪನ ಮನೆಯಲ್ಲಿರಲು ಜಾತಿ ಹೀನಳು; ಅಬಚಿಯಾದ ವೇಶ್ಯಾವೃತ್ತಿಯಲ್ಲಿರುವ ಅನಸೂಯಳ ಮನೆಯಲ್ಲಿರಲು ಬೇಕಾಗಿರುವಷ್ಟು ನೀಚತನ ಕುಸುಮಳಲ್ಲಿರಲಿಲ್ಲ. ಅಂತೂ ಇವಳಿಗೆ ಸರಿಯಾದ ಸ್ಥಾನವು ಸಮಾಜದಲ್ಲಿ ಇರಲಿಲ್ಲ.

## ೧೦

ಕುಸುಮಳು ತನ್ನ ಕೋಣೆಯಲ್ಲಿದ್ದು ಪುಸ್ತಕವೊಂದನ್ನೋದು ತ್ತಿದ್ದಳು. ಮನೆಯ ಹಿಂದುಗಡೆ ಯಾರೋ ಹಾಡಿದಂತೆ ಕೇಳಿಸಿತು. ಹಳೆಯ ತರಹದ ಹಾಡುಗಳವು. ಆ ಹಾಡುಗಳ ಗೊಡವೆ ತನಗೇತ ಕ್ಕೆಂದು ಸುಮ್ಮನೇ ಪುಸ್ತಕದಲ್ಲಿ ಮಗ್ನಳಾದಳು. ಕಾಲು ಗಂಟೆಯಾದ ನಂತರ ಮತ್ತೆ ಹೆಚ್ಚಿನ ಸ್ವರದಲ್ಲಿ ಹಾಡುಗಳು ಕೇಳಿಸಲಾರಂಭಿಸಿದವು. ಆದರೆ ಈ ಸಲ ಹಾಡಿದವರ ಧ್ವನಿ ಬೇರೆಯವರದಾಗಿದ್ದಿತು. ಅವುಗ ಳನ್ನು ಕೇಳಿದಂತೆಲ್ಲ ಕುಸುಮಳ ಹೃದಯದಲ್ಲಿ ಅಸ್ಪಷ್ಟವಾದ ಯಾವುದೋ ಒಂದು ಬಗೆಯ ಸುಖವನ್ನುಂಟುಮಾಡಿತು. ಅದು ಇಂಪಾಗಿ ಹಾಡಲ್ಪಟ್ಟಿ ತೆಂದಲ್ಲ; ಆದರೆ ಅದನ್ನು ಹಾಡುತ್ತಲಿದ್ದವರ ಧ್ವನಿ ಅವಳನ್ನು ಆಕರ್ಷಿ ಸುತಿತ್ತು, ಹತ್ತಿರ ಬರಮಾಡಿಕೊಳ್ಳುತ್ತಿತ್ತು. ಮೊದಲವಳಿಗೆ ಭಯ ವೆನಿಸಿತು; ಮುಂದೆ ಭಯವು ಆಕೆಯ ರೂಪನ್ನು ತಾಳಿತು. ಹಾಡುವವ ರಾರೆಂಬುದನ್ನು ತಿಳಿಯಲು ಆತುರಗೊಂಡಿತು ಅವಳ ಹೃದಯ. ಅವಳಲ್ಲಿ ಉಂಟಾದ ಆಶೆಯೆಂತಹದೆಂದು ಹೇಳಲು ಸಾಧ್ಯವಿರಲಿಲ್ಲ.

ಹಾಡು ಮುಗಿದೊಡನೆಯೇ, ಮಾಳಿಗೆ ಇಳಿದು ಬಂದು, ಶೃಂಗಾರದ ಸಡಗರದಲ್ಲಿದ್ದ ಅನಸೂಯಳನ್ನು ಸಮೀಪಿಸಿ, "ನಮ್ಮ ಮನೆಯ ಹಿಂದೆ ಯಾರೋ ಹಾಡಿದಂತೆ ಕಂಡುಬಂತು. ಯಾರವರು? ನಿನಗೇನಾದರೂ ಕೇಳಿಸಿತೇನು? ಅವರ ಪರಿಚಯ ನಿನಗಿದೆಯೆ?" ಎಂದು ಕೇಳಿದಳು.

ಹೊರಗಿನ ಜನರೊಂದಿಗೆ ಸೇರುವ ಅಭಿಲಾಷೆ ಕುಸುಮಳಿಗೆ ಉಂಟಾಗುತ್ತಿರುವುದು ಸಂತೋಷದ ವಿಷಯವೆಂದು ನೆನೆದು ನಗುತ್ತ, "ಅಲ್ಲ, ಕುಸುಮಾ, ಈ ಊರಲ್ಲಿ ಅನೇಕ ಸಿನೆಮಾಗೃಹಗಳಿವೆ. ಅಷ್ಟು ಬೇಸರವಾಗಿದ್ದರೆ, ಸಿನೆಮಾಕ್ಕೆ ಹೋಗೋಣವೆ? ಅಥವಾ ನೀನೊಬ್ಬಳೇ ಹೋಗುವಿಯೇನು?'' ಎಂದು ಕೇಳಿದಳು.

"ಛೆ, ಇಲ್ಲ. ಬೇಡ. ಅಲ್ಲಾ, ಮನೆ ಹಿಂದೆ ಯಾರೋ ಬಹಳ ಸೊಗಸಾಗಿ ಹಾಡಿದಂತೆ ಕೇಳಿಸಿದುದರಿಂದ, ಅವರು ಯಾರಾಗಿರಬಹು ದೆಂದು ವಿಚಾರಿಸಿದೆ ಅಷ್ಟೆ" ಎಂದು ಹೇಳಿ ಸುಮ್ಮನಾದಳು.

"ಯಾರೋ ಓರ್ವ ನಾಟಕದವರಂತೆ. ಈ ಊರಲ್ಲಿ ಒಂದು ಹಾಳಾದ ನಾಟಕ ಕಂಪನಿ ಇವೆ. ಬಹಳ ಹಳೆಯದು. ಅವರಿಗೆ ಆಡೋ ಚಟ ಬಿಡೋ ಹಾಗಿಲ್ಲ. ನಮ್ಮೂರವರಿಗೆ ನೋಡೋ ಚಟ ತಪ್ಪೋ ಹಾಗಿಲ್ಲ. ರೊಕ್ಕಾ ಮಾತ್ರ ಇಲ್ಲ. ಹೂಂ. ಬ್ಯಾಡಾಂದ್ರೆ ಬಿಡ್ತಾರೇನು ನಮ್ಮ ಛೇರ್ಮನ್? ಅದನ್ನು ಕಟ್ಟಿಕೊಂಡು ದಿನಾ ಅಳ್ತಾರೆ. ಕೈ ಬರೀದು ಮಾಡಿಕ್ಕೊಂಡು ಗೋಳಾಡ್ತಾರೆ."

"ಛೇರ್ಮನ್ಯಾರವ್ವಾ?"

"ಇದ್ದಾನೇಳು ಒಬ್ಬ ಮುದಿಯ. ಸತ್ಯನಾರಾಯಣರಾಯನೆಂಬಾತ. ಮಾಡೋ ಕೆಲ್ಸಾನಾದ್ರೂ ಏನು? ಈ ಹಾಳು ಕಂಪನೀನ ಕಟ್ಗೊಂಡು ಸಾಯ್ತಾರೆ. ಆಗಾಗ್ಯೆ ನಮ್ಮನಿಗೂ ಬರ್ತಾರೆ. ಹಳೇ ಪರಿಚಯ. ಬಿಡೋಕೆ ಆಗೋದಿಲ್ಲ. ಅವರೇನೂ ಛೇರ್ಮನೂ ಅಲ್ಲ, ಗೀರ್ಮನೂ ಅಲ್ಲ. ಹಿಂದೊಂದು ಸಲ ಕೌನ್ಸಿಲರರಾಗಿದ್ದಾಗ, ಹದಿನೈದು ದಿನಗಳ ಮಟ್ಟಿಗೆ ಛೇರ್ಮನ ಕೆಲ್ಸಾ ನೋಡಿದ್ದರಂತೆ. ಹಾಸ್ಯಕ್ಕೆ, ಜನರೆಲ್ಲರೂ ಛೇರ್ಮನರೆಂದು ಕರೀತಾರೆ."

ಹೀಗವರು ಮಾತನಾಡುತ್ತಿರುವಾಗ ಸತ್ಯನಾರಾಯಣರಾಯರು ಮನೆಯಲ್ಲಿ ಕಾಲಿಟ್ಟರು. ಅನಸೂಯಳಿಗೆ ಆಶ್ಚರ್ಯವೆನಿಸಿತು. ಕುಸುಮ ಳಿಗೂ ನಾಚಿಕೆಯೆನಿಸಿತು, ಪರಕೀಯರ ಮುಂದೆ ನಿಂತು ಮಾತನಾಡು ವುದಕ್ಕೆ. ಆದರೆ ಸ್ವಲ್ಪ ಧೈರ್ಯದಿಂದ ನಿಂತುಬಿಟ್ಟಳು; ಎಂದಿನಂತೆ ಒಳಗೆ ಓಡಿಹೋಗಲಿಲ್ಲ. ಬರಿತಲೆಯ ಸತ್ಯನಾರಾಯಣರಾಯರನ್ನು ನೋಡಿದರೆ ಕುಸುಮಳಿಗೆ ಸ್ವಲ್ಪ ನಗು ಬಂತು. ಅದರಿಂದ ತಾತ್ಸಾರವೂ ತಲೆ ದೋರಿತು. ಆದುದರಿಂದಲೇ ನಿಲ್ಲಲು ಧೈರ್ಯ ಬಂತು.

"ಕುಳಿತುಕೋ ಬೇಕು, ಛೇರ್ಮನ್ರವರೇ. ಇದೇನು ಇವತ್ತು ಲಾಡ್ಜಿನಲ್ಲಿ ಸಂಗೀತ, ಹಾಡು? ಎಲ್ಲೀದಿದು? ಮತ್ತೆ ಪುರುವಾತೇನು ನಿಮ್ಮ ಕಾಟಾ? ಸ್ವಲ್ಪ ದಿನ ನಿಂತಿತ್ತು. ನಮಗೂ ಸಮಾಧಾನ ಇತ್ತು. ದಿವಾಳಿ ತಗೆದ ಕಂಪನೀನ ಕಟ್ಗೊಂಡು ಹೀಗ್ಯಾಕೆ ಅಲೆದಾಡ್ತೀರೀಂತೀನಿ? ವಯಸ್ಸಾಯ್ತು. ಎಲ್ಹೋಯ್ತು ಹಿಂದಿನ ನಿಮ್ಮ ಬುದ್ಧಿವಂತಿಕೆ?

ಸಾಕುಮಾಡ್ರಿ ಇನ್ನು" ಎಂದು ಹಾಸ್ಯದಿಂದ ಆ ಮುದುಕನನ್ನು ಚುಚ್ಚಿ ಮಾತನಾಡಿದಳು.

"ಏನೋ ಬಿಡು. ನನಗೇನು. ನಮ್ಮ ಪಾಲುಗಾರ ಕುಟುಂಬರಾಯ ಇದ್ದಾನಲ್ಲ. ಅವನೇ ಎಲ್ಲವನ್ನೂ ನೋಡಿಕೊಳ್ಳುತ್ತಾನಂತೆ. ಯಾರೋ ಇಬ್ಬರೂ ಹೊಸಬರನ್ನೂ ತನ್ನವರನ್ನೇ ಕರೆಯಿಸಿದ್ದಾನೆ. ಎಲ್ಲಾ ಹೊಸ ಏರ್ಪಾಡುಗಳಂತೆ; ಲಾಭ ಬರುವ ಹಾಗೆ ಮಾಡುತ್ತಾರಂತೆ. ನನಗೇನು? ಏನೋ ಆರಂಭಿಸಿದ ಕಂಪೆನಿ ಮುಳುಗಬಾರದು. ಅಷ್ಟೇ. ನಾವು ಮೊದಲು ಆರಂಭಮಾಡಿದ್ದು ಅಳಿಯಬಾರದು; ಆಯಿತು. ನೋಡೋಣ, ಮುಂದೆ ಹೇಗೆ ಸಾಗುತ್ತದೋ. ಅಂತು ಸ್ವಲ್ಪ ಕಾಲ ಮಲಗಿಕೊಂಡ. ನಾಟಕ ಚಟುವಟಿಕೆ ಮತ್ತೆ ಆರಂಭವಾಯಿತು; ಅದೇ ಸಾಕು. ನನಗೆ ಸಂತೋಷ. ಯಾರಾದರೂ ನಡೆಯಿಸಲಿ. ನನಗೇಕೆ ಕೋಪ. ಏನಂತೆ, ಅನಸೂ?" ಎಂದು ಹೇಳುತ್ತ ಕುಸುಮಳಿರುವುದನ್ನು ಕಂಡು "ಈ ಹುಡುಗಿ ಯಾರಿವಳು?" ಎಂದು ಕೇಳಿದ.

"ನಮ್ಮವಳೇ. ನಮ್ಮಕ್ಕನ ಮಗಳು,"

"ಯಾವಾಗ ಬಂದಳು ಇಲ್ಲಿಗೆ?"

"ಏಳೆಂಟು ದಿನಗಳಾದವು."

"ಹಾಗೇನು? ಸರಿ. ಎಲ್ಲಿದ್ದಾಳೆ? ಏನು ಮಾಡುತ್ತಾಳೆ?"

"ಓದಿದ ಹುಡುಗಿ. ಕೆಲವು ದಿನಗಳ ಹಿಂದೆ ಅವಳ ತಂದೆ ಕಾಲವಾದರು. ಕೆಲವು ದಿನ ನನ್ನಲ್ಲೇ ಇರಬೇಕೆಂದು ಬಂದಿದ್ದಾಳೆ. ನನಗೇನು ಕಡಿಮೆ. ಅವಳಿಗೂ ತಂದೆಯ ಆಸ್ತಿ ಸಾಕಷ್ಟಿದೆ. ಹುಡುಗಿ ಹೇಗಿದ್ದಾಳೆ? ಸರಿಯಾದ ವರನೊಬ್ಬನನ್ನು ನೋಡ್ರಿ. ಮದುವೆಯ ಸಮಾರಂಭ ಹೊಡೆಯಿಸಿಬಿಡೋಣ" ಎಂದು ಸೂಚಿಸಿದಳು ಅನಸೂಯ.

"ಏನು ಮದುವೆಯೋ? ಏನು ಸರಿಯಾದ ಅನುಕೂಲವಾದ ವರಗಳೋ? ನನಗೊಂದೂ ತಿಳಿಯುವ ಹಾಗಿಲ್ಲ. ಇಂಥಾ ಮುಂದುವರಿದ ಕಾಲದಲ್ಲಿ ವಯಸ್ಸಾದ ಹುಡುಗಿಯರು ತಮಗೆ ಬೇಕಾದವರನ್ನು ತಾವೇ ಆರಿಸಿಕೊಳ್ಳುತ್ತಿರುವಾಗ, ನಮ್ಮಂಥವರದೇನು ಕೆಲಸ? ನಮ್ಮ ಸಲಹೆ ಸೂಚನೆಗಳನ್ನು ಯಾರು ಕೇಳಬೇಕು? ನಾವು ಆರಿಸಿದ ವರಗಳು ಇವರಿಗೆ

ಸರಿಬೀಳಬೇಕಲ್ಲ. ಹುಡುಗರು ಕೇಳುವಷ್ಟು ವರದಕ್ಷಿಣೆಯನ್ನೊದಗಿಸ ಬೇಕು. ಅಂತೂ ಎಲ್ಲವೂ ಸರಿಹೋದ ಮೇಲೆ, ಅಪ್ಪ, ಅಮ್ಮ ಇಲ್ಲದ ಹುಡುಗೀ ಅಂತ ತರ್ಕ! ಯಾಕಪ್ಪ, ಈ ಗೊಂದಲ? ಕಾಲ ಕೆಡುತ್ತಾ ಬಂದಿದೆ. ಇನ್ನೂ ಕೆಡಬಹುದು. ಏನೋ ಪ್ರೇಮವಂತೆ, ಪ್ರೀತಿಯಂತೆ, ಪ್ರೇಮ ವಿವಾಹವಂತೆ. ಹೂಂ, ನೋಡೋಣ; ಎಲ್ಲಿಯಾದರೂ ಆರಿಸಿ ನೋಡಿದರೆ ಸಿಗೋದಿಲ್ಲಾಂಬೋ ಹಾಗೇನು ಇಲ್ಲ” ಎಂದು ಮಾತು ಮುಗಿಸುತ್ತ ಕುಸುಮಳನ್ನು ಆಶೆಯಿಂದ ನೋಡ ತೊಡಗಿದ ಸತ್ಯನಾರಾ ಯಣರಾಯ.

ಅನಸೂಯಳು ತಾತ್ಸಾರದ ನೋಟದಿಂದ “ಅಲ್ಲಾ, ಮತ್ತೇನೂ ಇಲ್ಲ. ನೀವು ಸಕಲವೂ ತಿಳಿದವರೆಂದು ನಿಮ್ಮ ಮುಂದೆ ಮಾತಿಗೆಂದು ಹೇಳಿದೆ. ಈಗಿನ ಕಾಲದ ಹುಡುಗಿಯರಿಗೆ ಧನವಂತರಾದ ಹುಡುಗರೇ ಬೇಕು. ಇಲ್ಲವೇ ದೊಡ್ಡ ಕೆಲಸದಲ್ಲಿದ್ದು ಹೆಚ್ಚು ಸಂಪಾದಿಸುತ್ತಿರ ಬೇಕು. ಏನು ಕಾಲ ಬಂತಪ್ಪಾ ಇದು. ಏನೋ ತಮಗೇ ಎಲ್ಲಾ ಸ್ವಾತಂತ್ರ್ಯ ಬೇಕಂತೆ. ತಮ್ಮ ಗಂಡಂದಿರನ್ನು ತಾವೇ ಆರಿಸಿಕೊಳ್ಳುವ ರಂತೆ. ಇಂಥ ಗಂಡಂದಿರಿಂದ ಇವರಿಗೆ ಸುಖಕ್ಕಿಂತ ಕಷ್ಟವೇ ಜಾಸ್ತಿ” ಎಂದು ಅನಸೂಯ ಹೇಳುವ ಮಾತುಗಳು ರುಚಿಸಲಿಲ್ಲವಾದುದರಿಂದ ಕುಸುಮಳೆದ್ದು ತನ್ನ ಕೋಣೆಗೆ ಹೋಗಿ ಬಿಟ್ಟಳು.

“ಆ ಹುಡುಗೀಗೆ ಖಂಡಿತ ಮದುವೆ ಮಾಡಬೇಕೆಂದು ನಿಶ್ಚಯ ಮಾಡಿದಿಯೇನು?” ಎಂದು ಸತ್ಯನಾರಾಯಣನು ಕುತೂಹಲದಿಂದ ಅನ ಸೂಯಳನ್ನು ಕೇಳಿದ.

“ಏಕೆ? ಬೇಡವೇನು? ನಿಮಗೀ ಯೋಚನೆ ಸರಿಬೀಳಲಿಲ್ಲವೇನು?”

“ಎಂದಿಗೂ ಬೇಡ. ಮದುವೆ ಮಾಡಿಕೊಂಡವರೆಷ್ಟು ಮಂದಿ ಸುಖದಿಂದಿದ್ದಾರೆ ಹೇಳು? ಮೊದಲಿಗೆ ನಾಲ್ಕು ದಿನ. ಆ ಮೇಲೆ ಗಂಡು ಸಿನ ಹಾದಿ ಗಂಡುಸಿಗೆ; ಸ್ವೇಚ್ಛೆಯನ್ನು ಕಳೆದುಕೊಂಡ ಹೆಣ್ಣಿಗೆ ಮಾತ್ರ ದುಃಖ. ಹುಡುಗಿ ಲಕ್ಷಣವಂತೆ. ಯಾವನೋ ಒಬ್ಬ ಶ್ರೀಮಂತನಿಗೆ ಕಾಯಂ ಸಂಬಂಧ ಕುದುರಿಸಿ ಬಿಡು. ಕಾಯಂ ಇಟ್ಟುಕೊಂಡವನಿಗೂ ಹೆಮ್ಮೆ; ಇವಳಿಗೂ ಗೌರವ. ಇದು ಬಿಟ್ಟು ಮದುವೆ ಮಾಡಿದರೇನು ಪ್ರಯೋಜನ?. ಬೇಡ”

"ಹೋಗಲಿ. ಅಂಥಾ ಗಿರಾಕಿ ಯಾರನ್ನಾದರೂ ನೀವೇ ಹುಡುಕ ಬೇಕು. ನಾಲ್ಕು ಮಂದಿಯನ್ನು ತಿಳಿದವರು ನೀವು; ನಾಲ್ಕು ಕಡೆ ಅಡ್ಡಾಡೋರು. ನಿಮಗೆ ಇದು ಸಾಧಿಸುವುದು—ಆದರೆ ನಮ್ಮ ಕುಸುಮಳು ಈ ಬಗೆಯ ವ್ಯವಸ್ಥೆಗೆ ಒಪ್ಪುವಳೆಂಬ ನಂಬಿಕೆ ನನಗಿಲ್ಲ. ಆದರೂ........"

"ಒಪ್ಪಿಕೊಳ್ಳದಿದ್ದರೆ, ಶುದ್ಧ ಹುಚ್ಚಿ ಎಂದು ಹೇಳಬೇಕು. ನನ್ನ ಗತಿ ನೋಡು. ನನ್ನ ಹೆಂಡತಿ ಸತ್ತಾಗ, ಇಂಥ ಹುಡುಗಿ ಏನಾದರೂ ದೊರೆತಿದ್ದರೆ, ಈ ರೀತಿ ಮನೆ ಮನೆ ಅಲೆಯುವುದು ತಪ್ಪುತ್ತಿತ್ತು. ಎರಡನೇ ಮದುವೆ ಮಾಡಿಕೊಂಡದ್ದು ಮಹದಪರಾಧವಾದಂತಾಯಿತು."

"ಒಹೋ ಪಾಪ! ಏನು ಏಕಪತ್ನೀವ್ರತ ಪಾಲನೆ ಮಾಡೋ ನಿಗ್ರಹ ಶಕ್ತಿ ನಿಮ್ಮದು? ಸಾಕು ಬಿಡ್ರಿ ನಿಮ್ಮ! ಒಂದೇ, ಎರಡೇ, ಊರೊಳಗೆ ಮೈನೆರೆತ ವೇಶ್ಯಹುಡುಗೇರೇ ಸಾಲದಾಯಿತು ನಿಮ್ಮ ಲೆಕ್ಕಕ್ಕೆ. ಏನೋ ಹೇಳಲಿಕ್ಕೆ ಬಂದಾರೆ ಉಪದೇಶಾನ. ಸಾಕು, ಸಾಕು" ಎಂದು ಹೇಳಿ ಅನಸೂಯ ಅವನ ಬಾಯಿ ಮುಚ್ಚಿಸಿದಳು.

"ಅಲ್ಲೇ, ನೀನು ಕೇಳಿದೆ ಎಂದು ಸಮಾಧಾನ ಹೇಳಿದೆ. ಬಿಟ್ಟು ಬಿಡು. ನಿನ್ನ ಚಮತ್ಕಾರ ಯಾರಿಗೊತ್ತಿಲ್ಲ. ಏನು ಬೇಕಾದರೂ ಮಾಡಬಲ್ಲ ಮಹಾರಾಯಳು. ಸೂಳೇರs ಜಾತೀ ಅಂದ್ರ ಏನು ಸುಮಾರೆ? ಮನಸ್ಸು ಮಾಡಿದರೆ ಈಗೀಗಲೇ ಈ ಹುಡುಗೀನ ನನಗೆ ಜೋಡಿಸಿ ಕೊಡ್ತಿ. ಅಲ್ಲ, ಮಾತಿನ ಸರಣೀಲಿ ಅಂದೆ ಅಷ್ಟೆ."

"ಮುಚ್ಚಿರಿ ಬಾಯಿನ ಅವಳಿಗೇನಾದರೂ ಕೇಳಿಸ್ತೂಂದ್ರೆ ನಮ್ಮಿಬ್ಬರಿಗೂ ಆಗ್ತವೆ ಚೆಪ್ಪಲೀ ಮರ್ಯಾದೆ. ಆ ಹುಡುಗಿ ಬಹಳ ನೀತಿವಂತಳು. ಸೂಳೇರ ವೃತ್ತೀನೆ ನೆಲಸಮಾ ಮಾಡಿ, ಎಲ್ಲಾರ್ನ ಮನೆತನದ ಹೆಣ್ಣು ಮಕ್ಕಳಂತಿರಿಸಬೇಕೂಂತ ಹಠ ಹಿಡಿದಾಳ."

"ಸ್ವಲ್ಪ ಓದಿಕೊಂಡ್ರ ಬಂದು ಬಿಡ್ತೇನೋ ಬುದ್ಧಿ. ಕೈಯಾಗಿನ ಕಾಸು, ಆಸ್ತಿಗೆ ಯಾವನಾದರೂ ನಾಮಾ ಹಾಕ್ದ ಅಂದ್ರೆ ಆಗ ತಿಳೀತದ ಇವಳ ನೀತಿ."

"ಹೋಗಲಿ ಬಿಡ್ರಿ ಮಹರಾಯ್ರು. ಬರೋವಾಗ ಎದುರಿಗೆ ಯಾರು ಬಂದ್ರು? ಸುಮ್ಮನೇ ನಡೀರಿ ಮನೇಗೆ."

"ಅಲ್ಲೆ, ಅನಸೂ, ನೀನಂಬೋದು ನಿಜವೇನು? ಆ ಹುಡುಗೀಗೆ ಖಂಡಿತ ಮದುವೆ ಮಾಡ್ತೀ? ನನಗೆ ಬಾಯಾಗೆ ನೀರ ಬರ್ತಾವ. ನೋಡಿದರೆ ಹ್ಯಾಂಗೋ ಆಗ್ತದೆ!"

"ಇದಿದ್ದು ನಿಜಾ ಹೇಳಿದೆ. ಅವಳ ಯೋಚನಾನೇ ಬ್ಯಾಡ. ಮುದುಕರಾದ್ರಿ. ಏನು ಆ ನಾಟಕಾನೋ, ವ್ಯಾಲಿನ ಬೆಡಗೋ, ಇನ್ಯಾವ ಚಟನಾದ್ರು ಕಲಿತು ಸುಮ್ಮನಿರ್ರಿ."

"ನಾ ಬರ್ತೀನ ಹಂಗಾದ್ರೆ. ಬಂದ್ದಾದಿಗೆ ಸುಂಕಾ ಇಲ್ಲ. ಆಗಲಿ" ಎಂದು ಗೊಣಗುಟ್ಟಿ ಬಾಯಿ ಚಪ್ಪರಿಸುತ್ತ ಅವಳನ್ನು ಒಮ್ಮೆ ಮುದ್ದಿಟ್ಟು ಸತ್ಯನಾರಾಯಣನು ಹೊರಟು ಹೋದ.

ಆದರೆ ಅನಸೂಯಳಿಗೆ ಮಾತ್ರ ನಾನಾ ಬಗೆಯ ಯೋಚನೆಗಳು ತಲೆದೋರಹತ್ತಿದವು. ಸತ್ಯನಾರಾಯಣ ರಾಯನೇನೋ ಒಳ್ಳೆ ಮನುಷ್ಯ. ಹೆಣ್ಣೆಂದರೆ ಪ್ರೀತಿಯಿಂದ ನೋಡುವ ಮನುಷ್ಯ. ರೀತಿ, ನ್ಯಾಯ, ಎಲ್ಲಾ ವಿಧದಲ್ಲಿಯೂ ಅನುಕೂಲದಿಂದ ನಡೆದುಕೊಳ್ಳುವ ಸ್ವಭಾವದವ. ಹೆಚ್ಚು ವಯಸ್ಸಿನವನೆಂಬ ಕೊರತೆ ಹೊರತು ಬೇರೆ ಯಾವ ಆತಂಕವೂ ಇಲ್ಲ. ಕುಸುಮಳೊಪ್ಪಿದರೆ ಸತ್ಯನಾರಾಯಣ ರಾಯರು ಬಹಳ ಒಳ್ಳೆಯ ಗಿರಾಕಿಯಾಗಬಹುದು. ಕುಸುಮಳು ತನ್ನ ಮನೆಯಲ್ಲಿರಲಾರಳು; ಚಿಕ್ಕಪ್ಪನ ಮನೆಯಂತೂ ಅವಳಿಗೆ ನರಕಪ್ರಾಯ. ಅಂದಲ್ಲಿ ಈ ಗಿರಾಕಿಯನ್ನನುಸರಿಸಿ ಸುಖದಿಂದಿದ್ದರೆ ತಪ್ಪೇನು? ಕುಸುಮಳಿಗೆ ಮದುವೆಯಾಗುವುದು ಕಷ್ಟ. ವರ ಸಿಕ್ಕಿದರೂ ಬ್ರಾಹ್ಮಣ ಕುಲದವನೇ ಆಗಬೇಕು. ಎಷ್ಟರ ಮಟ್ಟಿಗೆ ಅನುಕೂಲಿಸುವುದೋ ತಿಳಿಯದು. ಸತ್ಯ ನಾರಾಯಣರಾಯನು ಕುಸುಮಳನ್ನು ಪೆಟ್ಟಿಗೆಯಲ್ಲಿಟ್ಟು ಹೂವಿನಿಂದ ದೇವರಂತೆ ಪೂಜಿಸಬಹುದು. ಇವಳಿಗೆ ಮನೆಯಲ್ಲಿ ಸರ್ವ ಒಡೆತನ ದೊರೆಯುವುದು. ಇವನನ್ನೇ ಕಡೆಗೆ ಮದುವೆಯಾದರೆ ತಪ್ಪೇನು? ಈ ರೀತಿ ಯೋಚಿಸಿದ ಹಾಗೆಲ್ಲಾ,

ಎಲ್ಲಾ ಏರ್ಪಾಟಿಗಿಂತಲೂ ಈ ರಾಯರ ಸಂಬಂಧವೇ ಅನುಕೂಲ ವಾದುದೆಂದು ಅನಸೂಯ ನಿಶ್ಚಯಿಸಿದಳು.

ಮಾರನೆಯ ದಿನ ಕುಸುಮಳೊಂದಿಗೆ ಇದರ ಬಗ್ಗೆ ವಿಚಾರ ನಡೆಯಿತು. ಮುಂದಿನ ಕರ್ತವ್ಯವೇನು, ಯಾವ ರೀತಿಯಲ್ಲಿ ಜೀವಿಸುವಳು, ಕಾಲ ಹೇಗೆ ಕಳೆಯುವಳೆಂದು ಅನಸೂಯ ಕೇಳಿದ ಪ್ರಶ್ನೆಗಳಿಗೆ ಕುಸುಮಳು "ಏನ್ಮಾಡ್ತೀನೋ ಯಾರಿಗೆ ಗೊತ್ತು......ಅದರಷ್ಟಕ್ಕೇನು ನಡೀತದೋ ನೋಡೋಣಾಂತ ಸುಮ್ಮನೇ ಕೂತಿದ್ದೇನೆ. ಮುಂದೇನು ಮಾಡಬೇಕೆಂಬೋದಿನ್ನೂ ನಿಶ್ಚಯ ಮಾಡಿಲ್ಲ. ಸಮಯ ಬಂದಂತೆ ನಡೆದುಕೊಂಡರಾಯಿತು....ಮದುವೆ ಮಾಡಿಕೊಳ್ತೀನೋ, ಇಲ್ಲವೊ ಹ್ಯಾಗೆ ಹೇಳಲಿ?....ಮದುವೆಯಾಗಬಾರದೆಂದು ಈಗ ಮಾತ್ರ ನಿಶ್ಚಯಿಸಿದ್ದೇನೆ. ನನಗೀಗ ಯಾರ ಮೇಲೂ ಪ್ರೀತಿಯಿಲ್ಲ.... ...ಯಾವುದಾದರೂ, ಸಣ್ಣ ಉದ್ಯೋಗ ಕಲ್ಪಿಸಿಕೊಳ್ಳುತ್ತೇನೆ. ಸಣ್ಣ ಹುಡುಗರಿಗೆ ಓದು ಹೇಳೋಣಾಂತ ಮಾಡಿಸಿ....ಇನ್ನೇನಾದರೂ ಮಾಡಿ ಕಾಲ ಕಳೆದರಾಯಿತು.... ತಿಳಿದವರ ಮನೆಯಾದರೆ ನನಗೇನೂ ಬೇಕಿಲ್ಲ. ಸುಮ್ಮನೆ ಓದು ಹೇಳಿಕೊಡುತ್ತೇನೆ ಅವರ ಮನೆಯ ಹುಡುಗರಿಗೆ" ಎಂದು ತನ್ನ ಭವಿಷ್ಯತ್‌ನ ಬಗ್ಗೆ ತೀರ ಅಸ್ಪಷ್ಟವಾದ ಈ ನಿರ್ಧಾರಗಳನ್ನು ಸೂಚಿಸಿದಳು.

ಅನಸೂಯಳಿಗೆ ಇದು ರುಚಿಸಲಿಲ್ಲ. ಆದರೂ ಅದನ್ನು ಹೊರಗೆ ತಿಳಿಯಗೊಡದಲೆ "ಕುಸುಮಾ, ಇಲ್ಲಿ ನೋಡು. ನೀನು ಸುಮ್ಮನೇ ಕೋಣೇ ಹಿಡಿದು ಕೂತೀಂದ್ರೆ ಬೇಸರಿಕೆಯಾಗಬಹುದೆಂದು ಈ ರೀತಿ ವಿಚಾರಿಸಿದೆ ಹೋಗಲಿ ಬಿಡು. ಸತ್ಯನಾರಾಯಣ ರಾಯರ ಮಕ್ಕಳು ಹತ್ತು ವರುಷದ ಹುಡುಗ, ಎಂಟು ವಯಸ್ಸಿನ ಹುಡುಗಿ ಇರುವರು. ಆತ ಅಂದು ನಮ್ಮ ಮನೀಗೆ ಬಂದಿದ್ದ. ನೀನೂ ನೋಡಿರಬಹುದು. ಆ ಹುಡುಗರಿಗೆ ಓದು ಹೇಳು. ಆತನೂ ಬಹಳ ಒಳ್ಳೆಯ ಮನುಷ್ಯ. ಮಾತನಾಡುವುದರಲ್ಲಿ ಚತುರ. ನಿನಗೂ ಹೊತ್ತು ಹೋದಂತಾಗ್ತದೆ" ಎಂದು ಸೂಚಿಸಿದಳು. ಕಾಲಾಂತರದಲ್ಲಿ ಇದು ಸ್ನೇಹದಲ್ಲಿ ರೂಪುಗೊಂಡು ರಾಯರ ಬಲೆಯಲ್ಲಿ ಕುಸುಮಳು ಬೀಳಬಹುದೆಂದು ಅನಸೂಯಳ

ಹಂಚಿಕೆ. ಹೀಗಾದಲ್ಲಿ ತನ್ನ ಸ್ಥಿತಿಯೂ ಸುಧಾರಿಸಬಹುದೆಂದು ಇವಳ ದೂರದ ಯೋಚನೆಯಾಗಿದ್ದಿತು.

"ಹಾಗೆ ಮಾಡ್ತೀನಿ. ಎರಡು ದಿನಗಳು ಹೇಳಿ ನೋಡಿದ ಮೇಲೆ ರಾಯರ ವರ್ತನೆಯಲ್ಲಿ ಯಾವ ಬಗೆಯ ಮೋಸವಿಲ್ಲೆಂದು ಖಾತ್ರಿಯಾದರೆ ಪಾಠ ಹೇಳುವುದನ್ನು ಮುಂದುವರಿಸುತ್ತೇನೆ. ಈಗಲೇ ಮಾತು ಕೊಡಲಾರೆ. ರಾಯರೆಂದರೆ ನನಗೇಕೋ ಒಳ್ಳೇ ಅಭಿಪ್ರಾಯವಿಲ್ಲ. ನೋಡೋಣ" ಎಂದು ಹೇಳಿದ ಕುಸುಮಳ ಮಾತುಗಳು, ಅನಸೂಯ ಳನ್ನು ಅಧೈರ್ಯಗೊಳಿಸಿದವು. ಆದರೂ ಕೆಲಸ ಕೈಮೀರಿ ಹೋಗ ಲಾರದೆಂದು, ತನ್ನ ಹಂಚಿಕೆ ಕೈಗೂಡುವುದೆಂದು ಅನಸೂಯೆ ನೆನೆದಳು. ರಾಯರು ಇಂಥ ಕಾರ್ಯಗಳಲ್ಲಿ ನುರಿತವರೆಂದು ಅವಳ ನಂಬಿಕೆ.

## ೧೧

ಮಾರನೆಯ ದಿನ ಕುಸುಮಳನ್ನು ತಮ್ಮ ಮನೆಗೆ ಸತ್ಯನಾರಾಯಣ ರಾಯರೇ ಸ್ವತಃ ಕರೆದುಕೊಂಡು ಹೋದರು. ಕುದುರೆಗಾಡಿಯಲ್ಲಿ ಅನವಸರವಾಗಿ ತನ್ನ ಮೊಣಕೈಗಳಿಂದ ಅವಳ ಮೃದು ಶರೀರವನ್ನು ಮುಟ್ಟುತ್ತ ಅವಳ ಸ್ಪರ್ಶ ಸುಖವೇ ಸ್ವರ್ಗವೆಂದು ಮೈಮರೆತಗುಂಪಿನಲ್ಲಿ ರಾಯರು ಮನೆ ಸೇರಿದರು. ಇದೇಕೋ ಒಳ್ಳೆಯ ಶಕುನವಲ್ಲವೆಂದು ಕುಸುಮಳು ಯೋಚನೆಗೊಳಗಾದಳು. ಆದರೆ ದುಡುಕುವುದು ಒಳ್ಳೆಯ ದಲ್ಲವೆಂದು ಸುಮ್ಮನಾದಳು.

ಸತ್ಯನಾರಾಯಣ ರಾಯರ ಮಕ್ಕಳಿಬ್ಬರೂ ಬಹಳ ಚತುರರು. ತಾಯಿಯಿಲ್ಲದ ತಬ್ಬಲಿಗಳಾದುದರಿಂದ ಅವರನ್ನು ಕಂಡೊಡನೆಯೆ ಅವಳ ಮನಸ್ಸು ಕರಗಿಹೋಯಿತು. ಆ ಹುಡುಗರ ಮರ್ಯಾದೆಪರ ನಡತೆಗಳು, ವಿನಯದಿಂದ ಕೂಡಿದ ನಯವಾದ ಮಾತುಗಳು ಇವಳ ಮನಸ್ಸಿಗೆ ಹಿಡಿಯಿತು. ರಾಯರ ಮನೆ ಸ್ವರ್ಗದಂತೆ ಕಂಡುಬಂತು. ಗೋಪಾಲರಾಯನ ಮನೆಗೂ, ಈ ಮನೆಗೂ ಎಷ್ಟು ಅಂತರ. ಇಲ್ಲಿದ್ದು, ಹುಡುಗರ ಜತೆಯಲ್ಲಿ ಕಾಲಕಳೆಯುವುದು ಅವಳಿಗೆ ಆನಂದವೆನಿಸಿತು. ಮನಸ್ಸು ಹಗುರಾಯಿತು. ಸಂತೋಷ ಉಕ್ಕೇರಿತು. ದೈವವೀರೀತಿ ಅನುಕೂಲ ಮಾಡಿ ಕೊಟ್ಟದುದಕ್ಕೆ ಮನಸಾ ವಂದಿಸಿದಳು. ಅವಳ ಮಾರ್ಗವು ಮುಂದೆಯೂ ಸುಗಮವಾಗಬಹುದೆಂದು ನೆನೆದಳು.

ಸತ್ಯನಾರಾಯಣ ರಾಯರು ಮಕ್ಕಳಿಗೆ ಕುಸುಮಳ ಪರಿಚಯ ಮಾಡಿಕೊಟ್ಟು, ಆ ಹುಡುಗರು ಮರೆಯಾದ ಮೇಲೆ "ಕುಸುಮಾದೇವಿ ಯವರೇ, ನೀವು ಇಲ್ಲಿಯೇ ಇದ್ದುಬಿಟ್ಟರೆ ನನಗಿನ್ನೂ ಸಂತೋಷ. ನಿಮ್ಮಂಥ ತಿಳಿದವರು ನನ್ನ ಮಕ್ಕಳ ಪಾಲಿಗೆ ದೊರಕಿದುದು ನನ್ನ ಭಾಗ್ಯವೆನ್ನಬೇಕು. ಅದಕ್ಕಿಂತಲೂ ನಿಮ್ಮ ಪರಿಚಯ ನನಗಾ ದುದು ಬಹಳ ಸಂತೋಷದ ವಿಷಯ. ನೀವು ನಮ್ಮ ಮನೆಯಲ್ಲಿರುವು ದಾದರೆ, ನನಗೆ ಹೆಚ್ಚಿನ ಆನಂದವಾಗುವುದು" ಎಂದು ಅವಸರವಸರ ವಾಗಿ ಹೇಳಿದ ಅವನ ಮಾತುಗಳಷ್ಟು ಸಮಾಧಾನಕರವಾಗಿರಲಿಲ್ಲ.

ಅವನ ಮಾತುಗಳನ್ನು ಗಮನದಲ್ಲಿ ತಾರದವಳಂತೆ ತಾತ್ಸಾರದ ನೋಟ ದಿಂದ "ನೋಡೋಣ. ಈಗೇಕೆ ನಿಮ್ಮ ಮನೆಯಲ್ಲಿರುವ ವಿಚಾರ?" ಎಂದು ಹೇಳಿದಳು.

ಸತ್ಯನಾರಾಯಣ ರಾಯರ ಮನೆಯ ಹುಡುಗರು ಬಹಳ ಒಳ್ಳೆ ಯವರು. ಮಾತಿನಲ್ಲಿ ಬಹಳ ಕಾಲ ಕಳೆದು, ತಮ್ಮ ಮನೆಯ ಎಲ್ಲ ವಸ್ತುಗಳನ್ನು ತೋರಿಸುವ ಹೊತ್ತಿಗೆ ಮಧ್ಯಾಹ್ನವಾಯಿತು. ಹೊತ್ತಾ ಯಿತೆಂದು ಅಲ್ಲೇ ಊಟಕ್ಕೇಳಬೇಕೆಂದು ಒತ್ತಾಯಪಡಿಸಿದರು. ಕುಸು ಮಳಿಗೆ ಅಲ್ಲಿ ನಿಲ್ಲಲು ಮನಸ್ಸಿರಲಿಲ್ಲ. ಹುಡುಗರು ತಮ್ಮ ಪ್ರೀತಿಯ ಮಾತಿನಲ್ಲಿ ಇರಲೇಬೇಕೆಂದು ಆಗ್ರಹ ಮಾಡಿದರು. ಅವಳು ನಿಲ್ಲದಿದ್ದರೆ ತಾವ್ಯಾರೂ ಊಟ ಮಾಡುವುದಿಲ್ಲವೆಂದು ಹಠ ಹಿಡಿದರು. ತಪ್ಪಿಸಿ ಕೊಳ್ಳಲು ಬೇರೆ ಹಾದಿ ಇರಲಿಲ್ಲ. ಊಟಕ್ಕೆ ಕುಳಿತು ಕೊಳ್ಳುವಾಗ ರಾಯರೂ ತಮ್ಮ ಪಂಕ್ತಿಯಲ್ಲಿ ಊಟ ಮಾಡುವುದು ಕಂಡು ಬಂತು. ಇದು ಸರಿ ಬೀಳಲಿಲ್ಲವಾದರೂ ನಿರ್ವಾಹವಿಲ್ಲದೆ ಊಟಮಾಡಬೇಕಾ ಯಿತು.

ಇದು ಅನಾಚಾರವಲ್ಲವೇ ಎಂದು ಕೇಳಿದಾಗ ರಾಯರು, ಅಂತಹ ಆಚಾರವಂತರು ನಮ್ಮ ಮನೆಯಲ್ಲಿ ಯಾರೂ ಇಲ್ಲವೆಂದೂ, ಇರುವ ಒಬ್ಬಳು ತಮ್ಮ ಅಕ್ಕ ಎಲ್ಲೋ ತನ್ನ ವ್ಯವಹಾರದಲ್ಲಿದ್ದು, ಯಾವ ಗೊಡವೆಗೂ ಬರುವುದಿಲ್ಲವೆಂದೂ ಸೂಚಿಸಿದರು.

ಊಟವಾದ ನಂತರ ಹುಡುಗರು ತಮ್ಮ ಪುಸ್ತಕಗಳನ್ನು ಹರವಿ ಕೊಂಡು ಕೂತು ತಮಗೆ ಬಂದ ಪಾಠಗಳನ್ನೆಲ್ಲಾ ಓದಿದರು. ಹುಡು ಗರ ಹುರುಪನ್ನು ಕೆಡಿಸಬಾರದೆಂಬ ಉದ್ದೇಶದಿಂದ ಕುಸುಮಳು ಸ್ವಲ್ಪ ಸಮಯ ಕೂತು ಕೇಳಿದಳು. ರಾಯ ಎದುರಿನಲ್ಲೇ ಕೂತು ಕುಸುಮ ಳನ್ನೇ ದಿಟ್ಟಿಸಿ ನೋಡುತ್ತಿದ್ದುದು ಅವಳಿಗೆ ತಿಳಿದಿತ್ತು. ದೊಡ್ಡವರ ಮನೆ; ಎದುರು ಮಾತನಾಡುವುದು ಸಭ್ಯ ರೀತಿಯಲ್ಲವೆಂದು ಸುಮ್ಮ ನಿದ್ದಳು.

"ಇಂತಹ ಹಾಳು ಉರಿಯುವ ಬಿಸಿಲಿನಲ್ಲಿ ಮನೆಗೆ ಹೋಗಲೇ ಬೇಕೇನು? ಬಿಸಿಲಿಳಿದ ಮೇಲೆ ಹೋದರಾಯಿತು. ಸ್ವಲ್ಪ ವಿಶ್ರಮಿಸಿರಿ

ಮಗೂ, ಇವರಿಗೆ ಆ ಪಕ್ಕದ ಕೋಣೆಯಲ್ಲಿ ಹಾಸಿಗೆ ಹಾಕವ್ವಾ, ಮಲಗಲಿ'' ಎಂದು ಸತ್ಯನಾರಾಯಣರಾಯನು ಹೇಳಿದ.

"ನಾನು ಮಲಗುವುದಿಲ್ಲ. ಹಗಲು ಮಲಗುವ ಪರಿಪಾಠವಿಲ್ಲ. ಕ್ಷಮಿಸಬೇಕು". ಎಂದು ಸುಳ್ಳು ಹೇಳಿದರೂ ಆ ಮುದುಕನ ಬಲವಂತ ತಪ್ಪುವಂತೆ ಕಂಡು ಬರಲಿಲ್ಲ.

''ಇರಲಿ, ಸ್ವಲ್ಪ ಅಡ್ಡಾದರೆ ತಪ್ಪೇನು? ಬಿಸಿಲು ಕಾಲ. ಮೈದಣಿಯುವುದು ಬೇಗ. ವಿಶ್ರಾಂತಿ ಬೇಡವೆ?" ಎಂದು ಅವಳಿಗಾಗಿ ಏರ್ಪಡಿಸಿದ ಕೋಣೆಯನ್ನು ತೋರಿಸಿದ. ಹುಡುಗರೆಲ್ಲಿ ಮಲಗಗೊಡುವರು? ಕೋಣೆಯೊಳಗೆ ಬಂದು ತಮಗೆ ಕತೆ ಹೇಳಬೇಕೆಂದು ಒತ್ತಾಯ ಮಾಡಿದರು. ಅವರ ಸಮಾಧಾನಕ್ಕೆಂದು ಕತೆಗಳನ್ನೂ ಹೇಳಿ ಆಯಿತು. ಕತೆ ಕೇಳುತ್ತ ಹುಡುಗರು ಮಲಗಿದರು. ಕುಸುಮಳಿಗೂ ನಿದ್ದೆ ಹತ್ತಿತು......

ಸತ್ಯನಾರಾಯಣ ರಾಯರ ದಯೆಯಿಂದ ಕುಸುಮಳ ಜೀವನವು ಒಂದು ಹದಕ್ಕೆ ಬಂದಂತಾಯಿತು. ಪ್ರಪಂಚದ ವಿಶಾಲವಾದ ಕ್ಷೇತ್ರದಲ್ಲಿ ಅನೇಕ ಬಗೆಯ ಜನರ ಪರಿಚಯ ಮಾಡಿಕೊಳ್ಳುವ ಸಮಯ ವೊದಗಿತು. ಕಾಲವು ಅತಿ ವೇಗವಾಗಿ ಸಾಗುವಂತೆ ಕಂಡು ಬಂತು. ದಿನವೂ ಐದಾರು ಗಂಟೆಗಳ ಕಾಲ ರಾಯರ ಮನೆಯಲ್ಲಿ ಕಳೆದು ಹೋಗುತ್ತಿತ್ತು. ರಾಯರ ಬಗ್ಗೆ ತನಗಿದ್ದ ಅಭಿಪ್ರಾಯವು ಸರಿಯಾದುದಲ್ಲೆಂದೆನಿಸಿತು. ಅವರ ಮನೆಯಲ್ಲಿಯ ಹುಡುಗರಿಬ್ಬರೊಂದಿಗೆ ಆತನೂ ಒಬ್ಬ ಬೆಳೆದ ಹುಡುಗನಂತೆ ವರ್ತಿಸುತ್ತಿದ್ದನು. ಸಲುಗೆಯಿಂದ ಕುಸುಮಳು ಅನೇಕ ಸಲ ವಿನಾಕಾರಣ ಕೋಪಿಸಿಕೊಳ್ಳುವುದು, ಸಿಡುಕಿನಿಂದ ಬೈಯುವುದು, ಅವನ ನಡೆನುಡಿಯನ್ನು ತಿದ್ದುವುದು, ಮತ್ತೇನು ಮಾಡಿದರೂ ರಾಯರಿಗೆ ಕೋಪ ಬರುತ್ತಿರಲಿಲ್ಲ. ಕಳೆಯಿಲ್ಲದ ತನ್ನ ಮನೆಗೆ ಜೀವಕಳೆಯನ್ನು ತಂದು ಕೊಟ್ಟಳೆಂಬ ಸಂತೋಷ, ಅವಳ ಈ ಕೋಪ, ಸಿಡುಕಿನ ವರ್ತನೆಯನ್ನು ಮರೆಯುವಂತೆ ಮಾಡಿತು. ಕುಸುಮಳು ಕೋಪದಿಂದ ಆರ್ಭಟಿಸಲು ಮೊದಲಿಟ್ಟರೆ, ರಾಯರು ಭಯದಿಂದ ನಡುಗುತ್ತಿದ್ದರು. ಅವಳ ಕೋಪವನ್ನು ಶಾಂತಗೊಳಿಸಲು ಏನು ಬೇಕಾದರೂ ಮಾಡಲು ಸಿದ್ಧನಿದ್ದರು. ತನಗವರ ಪರಿಚಯ, ತಬ್ಬಲಿ

ಯಾದ ಅವರ ಮಕ್ಕಳಿಗೆ ತನ್ನ ಸಹಾಯ, ಮನೆಯಲ್ಲಿ ಇವರಿರುವಿಕೆ ಯಿಂದ ಕಂಡು ಬರುವ ಜೀವಕಳೆ ಇವುಗಳೆಲ್ಲವನ್ನೂ ಒದಗಿಸಿಕೊಟ್ಟ ಅನಸೂಯೆಯನ್ನು ಮನದಲ್ಲಿಯೆ ವಂದಿಸಿದಳು. ರಾಯರಿಗೂ ಕುಸುಮಳ ಪರಿಚಯವಾದುದು ಹೆಮ್ಮೆಯೆನಿಸಿತು. ತನಗಿಷ್ಟು ಮರ್ಯಾದೆಯನ್ನಿತ್ತು, ದೇವಿಯಂತೆ ಪೂಜಿಸುತ್ತಿರುವ ರಾಯರ ಅಮಾಯಕತೆಗೆ ಕುಸುಮಳು ಹಿಗ್ಗಿದಳು. ದಿಕ್ಕಿಲ್ಲದ ಅನಾಥೆಯಾದ ತನಗೆ ಈ ಪ್ರಪಂಚದಲ್ಲಿ ಇಂಥ ನೆರವನ್ನು ಕೊಡಲು ಬಂದವರಲ್ಲಿ ರಾಯರಲ್ಲವೆ ಮೊದಲನೆಯವರು? ಇವರ ಈ ಔದಾರ್ಯದಲ್ಲಿ ಸ್ವಾರ್ಥವಿರಬಹುದು. ಬೇರೆ ಕೆಟ್ಟ ಉದ್ದೇಶ ವೇನಾದರೂ ಇರಬಹುದು. ಸೂಳೆಯರ ಮನೆಯಲ್ಲಿ ಇರುವ ಕುಸುಮಳ ಜನ್ಮರಹಸ್ಯವಾದರೂ ರಾಯರಿಗೆ ಹೇಗೆ ತಿಳಿದರಬೇಕು? ಏನೋ ಮಾತಿನ ಸರಣಿಯಲ್ಲಿ ಅಂದು ಮದುವೆಯ ಮಾತು ಬಂದಾಗ, ಅನಸೂಯೆ ಹೇಳಿದ ವಿವರಗಳಲ್ಲಿ ಈ ವಿಷಯ ಸ್ಪಷ್ಟವಾಗಿದ್ದಿಲ್ಲ. ಕುಸುಮಳಾದರೂ ಇವರು ಮಾತನಾಡುವಾಗ ಎದುರಿಗಿರಲಿಲ್ಲ ತನ್ನ ದೃಷ್ಟಿಯಲ್ಲಿ ಜನರ ರೀತಿ ನೀತಿಗಳು ಕಂಡು ಬಂದಂತೆ, ಮನೆಯಲ್ಲಿ ಇವಳಿಗೆ ಸರಿಯಾದ ಏಕೆ, ಹೆಚ್ಚಿನ, ಸ್ಥಾನವನ್ನು ದಯಪಾಲಿಸಿದವರೆಂದರೆ, ಜೀವನದಲ್ಲಿ ಆಗು ಹೋಗುಗಳನ್ನು ಅನುಭವಿಸಿದ, ಸತ್ಯನಾರಾಯಣರಾಯರೆ. ತನಗೆ ಇಂಥ ಉದಾರ ವ್ಯಕ್ತಿಯ ಸಹಾಯ ದೊರಕಿಸಿದುದಕ್ಕೆ ದೇವರಿಗೆ ವಂದ ನೆಗಳನ್ನರ್ಪಿಸಿದಳು.

ರಾಯರ ವರ್ತನೆಯಲ್ಲಿ ಕುಸುಮಳಿಗೆ ಒಂದು ವರ್ತನೆ ಮಾತ್ರ ಮನಸ್ಸಿಗೆ ಬರಲಿಲ್ಲ. ಇಲ್ಲದ ಅವಕಾಶ ಕಲ್ಪಿಸಿಕೊಂಡು, ಅನಾವಶ್ಯಕ ವಾಗಿ, ಅವಳ ಕೈಯನ್ನಾಗಲಿ, ಭುಜವನ್ನಾಗಲಿ, ಮುಟ್ಟುವ ಪರಿಪಾಠ ವಿತ್ತು. ವಯಸ್ಸಿನಲ್ಲಿ ತನಗಿಂತಲೂ ಮೂರರಷ್ಟು ಹಿರಿಯನಾದವನಲ್ಲಿ ಈ ಬಗೆಯ ಸರಸ ವ್ಯಾಮೋಹ ವಿರಸವೆನಿಸುತ್ತಿತ್ತು. ಇದನ್ನು ಬುದ್ಧಿ ಪೂರ್ವಕವಾಗಿ ಮಾಡುತ್ತಿದ್ದನೆಂಬುದನ್ನು ನಿಶ್ಚಯಿಸಲು ಕುಸುಮಳಿಗೆ ಆಗದ ಕೆಲಸವಾಗಿತ್ತು. ಇಷ್ಟು ಸ್ವಲ್ಪ ವಿಷಯಕ್ಕೆ ರಾಯರ ಮೇಲೆ ಕೋಪಿಸಿಕೊಳ್ಳುವುದು, ಹಾಗೆ ಮಾಡಬೇಡವೆಂದು ಸೂಚಿಸುವುದು, ಸರಿಯಲ್ಲವೆನಿಸಿತು. ಮನೆಯಲ್ಲಿ ಇಂಥ ಸ್ಥಾನವನ್ನು ಕೊಟ್ಟವನಿಗೆ

ಸಂಕೋಚವಿಲ್ಲದೆ ಹೇಳಿ ಬಿಡುವುದು ಅವಮರ್ಯಾದೆಯೆನಿಸಿತು. ಆದರೆ ಮುದುಕನ ಬಡಬಡಿಕೆ ದಿನದಿನಕ್ಕೂ ಹೆಚ್ಚತೊಡಗಿತು.

ಒಂದು ದಿನ ಸಾಹಸಮಾಡಿ ಪಕ್ಕದಲ್ಲಿ ಹುಡುಗರಾರೂ ಇಲ್ಲದಿದ್ದುದನ್ನು ಕಂಡು "ಇದೇನು? ನನ್ನನ್ನು ಹೊಡೆದು ಮಾತನಾಡಿಸಿದರೇನೇ ನನಗೆ ತಿಳಿಯೋದೂಂತ ತಿಳಕೊಂಡೀರೇನು? ನಾನೇನು ಕಿವುಡೇ? ದೂರದಿಂದಲೇ ಹೇಳ್ರಿ. ನನಗೆ ಕೇಳಿಸ್ತದೆ" ಎಂದು ಹೇಳಿ ಬಿಟ್ಟಳು. ಇದೇ ಸಮಯವೆಂದು ತಿಳಿದು ರಾಯರು ಅವಳೆರಡು ಕೈಗಳನ್ನು ಗಟ್ಟಿಯಾಗಿ ಎತ್ತಿ ಹಿಡಿದು, "ಆದೇಕೋ, ನಿನ್ನ ಮುಟ್ಟಿದರೇನೇ ನನಗೊಂದು ಬಗೆಯ ಸಂತೋಷ, ಸುಖ. ಇದು ನಿನಗೆ ತಿಳಿದಿದ್ದರೆ ನೀನೀ ರೀತಿ ಹೇಳ್ತಿದ್ದಿಲ್ಲ'' ಎಂದು ತನ್ನ ಮನದಾಸೆಯನ್ನು ತೋಡಿಕೊಂಡ.

ಕುಸುಮಳ ಆಗಿನ ಅವಸ್ಥೆ ಹೆಡೆ ತುಳಿದ ಹಾವಿನಂತಿದ್ದಿತು. ಅವನ ಕೈಹಿಡಿತವನ್ನು ರಭಸದಿಂದ ಕೊಸರಿಸಿಕೊಂಡು "ಹಾಗಾದರೆ ನಾನಿನ್ನು ಮುಂದೆ ನಿಮ್ಮ ಮನೀಗೆ ಬರೋದಿಲ್ಲ" ಎಂದು ಹೇಳಿ ದೂರ ಸರಿದು ಬಿಟ್ಟಳು.

''ಅಲ್ಲ, ಕುಸುಮಾ, ಯೋಚಿಸಿ ನೋಡು. ನಾನು ಯಾವ ರೀತಿಯಲ್ಲಿ ನಿನಗಾಗಿ ಇಷ್ಟು ದಿನದಿಂದ ತಪಸ್ಸು ಮಾಡುತ್ತ ಕಾದಿದ್ದೇನೆ ನನ್ನಲ್ಲಿ ಉಂಟಾದ ಕಾಮಬಾಧೆ ಇನ್ನೂ ತಿಳಿದಿಲ್ಲವೆ? ನೀನೀ ಮನೆಯಲ್ಲಿದ್ದೆ ಎಂದರೆ ಮನೆಗೆ ಒಂದು ಬಗೆಯ ಶೋಭೆ. ಹಡೆದ ತಾಯಿಯಂತೆ ನೀನು ನನ್ನ ಮಕ್ಕಳ ಆರೈಕೆಯಲ್ಲಿ ಮಗ್ನಳಾಗಿರುವುದು ಆ ನನ್ನ ಕೊರತೆ ದೂರಾದಂತಾಯಿತು. ನಿನ್ನನ್ನು ಕಂಡರೆ ಮಕ್ಕಳಿಗೆಷ್ಟು ಆನಂದ! ಅವರ ಪಾಲಿನ ದೇವಿಯಂತಿರುವಿ ನೀನು. ನನ್ನ ಈ ಪ್ರೀತಿಯ ಸೂಚನೆ ನಿನಗೆ ಕೋಪವನ್ನುಂಟು ಮಾಡುವುದೆಂದು ನಾನೆಣಿಸಲಿಲ್ಲ. ನಿನ್ನ ಈ ಪ್ರೀತಿಮಯ ಜೀವನದಲ್ಲಿ, ಪ್ರೇಮಮಯ ಹೃದಯದಲ್ಲಿ ನನಗೂ ಸ್ಥಾನವಿದೆಯೆಂದು ಭಾವಿಸಿದೆ. ನನ್ನ ಭಾವನೆ ತಪ್ಪಾಗಿರಬಹುದು ಕೇವಲ ಕ್ಷುದ್ರ ಮನಸ್ಸುಳ್ಳ ಸ್ತ್ರೀಯರಂತೆ ನೀನೂ ನನ್ನ ವಯಸ್ಸಿನ ಬಗ್ಗೆ ಲಕ್ಷ್ಯಕೊಡುವಿ ಎಂದು ತಿಳಿಯಲಿಲ್ಲ. ಇಲ್ಲ..........ಇಲ್ಲ ......ನಾನು ನೀತಿವಂತನಲ್ಲ. ಸ್ತ್ರೀಲೋಲನಲ್ಲವೆಂದು ಸುಳ್ಳು ಹೇಳುವ

ಧೈರ್ಯವಿಲ್ಲ ನನಗೆ. ನಿನ್ನೆದುರು ನಿಜ ಹೇಳಬೇಕೆನಿಸುತ್ತದೆ. ನೀನು ಸ್ಪಷ್ಟವಾದಿಯೆಂಬುದನ್ನು ತಿಳಿದಿದ್ದೇನೆ. ಎಂಥ ನೀತಿವಂತನೂ, ಶೀಲ ವಂತನೂ ನಿನ್ನ ಬೆಲೆಯನ್ನು ಕಟ್ಟಲಾರ. ನಿನ್ನ ಅಂತಸ್ತನ್ನು ನಾನು ಸರಿಯಾಗಿ ತಿಳಿಯಲೆತ್ನಿಸಿದ್ದೇನೆ. ನಿನ್ನ ಹೃದಯಾಂತರಾಳದಲ್ಲಿ ನನಗೆ ಸ್ಥಾನ ಕೊಡುವಷ್ಟು ನೀನು ಉದಾರಿಯೆಂದು ನನಗೆ ಭರವಸೆಯಿದೆ. ಅನಸೂಯೆ ಮೊನ್ನೆ ತಾನೇ ಹೇಳಿದಳು, ನೀನಿನ್ನೂ ಯಾರನ್ನೂ ಪ್ರೀತಿ ಸಿಲ್ಲವೆಂದು. ನಿನ್ನ ಪ್ರೇಮದ ಮೂರ್ತಿ ನಾನೇಕೆ ಆಗ ಬಾರದು? ಹೇಳು ಕುಸುಮಾ? ನನ್ನೆದೆ ಆತುರ ಪಡುತ್ತಿದೆ. ಹೆಂಡಂದಿರಿಲ್ಲದ ಗಂಡಸ ರೆಲ್ಲರಿಗೂ ನಿನ್ನನ್ನು ಮದುವೆಯಾಗುವ ಬಾಧ್ಯತೆ ಇದೆಯಲ್ಲವೆ? ಆ ಸುಯೋಗ ನನಗೇಕೆ ಒದಗಬಾರದು? ನಿನ್ನನ್ನು ಅವಮಾನಿಸಲು ಈ ಸಾಹಸ ಮಾಡುತ್ತಿರುವೆನೆಂದು ಭಾವಿಸಬೇಡ. ಸಮಯವನ್ನು ಸಾಧಿಸಿ ನಿನ್ನಭಿಪ್ರಾಯ ತಿಳಿಯಬೇಕೆಂದಿದ್ದೆ. ಈಗದೊದಗಿತು. ನನಗೆ ಪ್ರೇಮ ಭಿಕ್ಷೆಯನ್ನು ನೀಡುವೆಯಾ?'' ಎಂದು ಬೇಡಿಕೊಂಡ ಸತ್ಯನಾರಾಯಣ ರಾಯ.

ಕುಸುಮಳ ಹೃದಯದಲ್ಲಿ ಕಲಮಲವೆದ್ದಿತು. ಪಿತ್ತ ತಲೆಗೇರಿತು. ಕಣ್ಣು ಕೆಂಪು ಮಾಡಿ ಅವನನ್ನು ಸುಮ್ಮನೇ ದುರದುರ ನೋಡಿದಳು. ಕೋಪದ ಭರದಲ್ಲಿ ಏನಾದರೂ ಮಾಡಿಬಿಡುವಳೋ ಎಂಬಂತೆ ಕಂಡು ಬಂತು. ಆ ದೊಡ್ಡ ಉಪನ್ಯಾಸ ಅವಳಿಗೆ ಬೇಡವಾಗಿತ್ತು. ಕೇಳಿ ದುದಾಯಿತು. ಮಾಡುವುದೇನು? ಮರುಕ್ಷಣದಲ್ಲಿಯೇ ಸ್ವಲ್ಪ ಚೇತರಿಸಿ ಕೊಂಡಳು. ನಿನ್ನನ್ನು ಮದುವೆಯಾಗಲಾರೆನೆಂಬ ಅಸಹನೆಯ ಉತ್ತರ ವನ್ನು ಕೊಡುವುದು ಆ ಸಮಯಕ್ಕೆ ಉಚಿತವೆನಿಸಲಿಲ್ಲ. ಯೋಚಿಸತಕ್ಕ ವಿಷಯವಾಗಿತ್ತು.

ಆವೇಶದ ಭರದಲ್ಲಿ ಅವಳ ಮೈ ಬೆವರಿಟ್ಟಿತು. ಅಲ್ಲಿಯ ಆಸನದ ಮೇಲೆ ಕುಳಿತು ತರ್ಕಿಸತೊಡಗಿದಳು. ಇವನ ಪ್ರೇಮಭಿಕ್ಷೆಯನ್ನು ನಿರಾಕರಿಸುವುದು ಉಚಿತವೆ? ಸಮಾಜದಲ್ಲಿ ಯಾರೂ ಕೊಡದ ಸ್ಥಾನ ವನ್ನು ಕೊಟ್ಟು ಯೋಗ್ಯ ರೀತಿಯಲ್ಲಿ ತನ್ನ ಮನೆಯ ದೇವಿಯಂತೆ ಪೂಜಿ ಸಲು ಸಿದ್ಧನಾದ ಇವನ ಬೇಡಿಕೆಯಲ್ಲಿ ಮೋಸವಿದೆಯೆ? ಅಪನಂಬಿಕೆಗೆ

ಎಡೆಯುಂಟೆ? ದೊಡ್ಡವರೆನಿಸಿಕೊಂಡವರ ಮನೆಯಲ್ಲಿ ತನ್ನ ಸ್ಥಾನ ವೇನಾಗಿತ್ತು? ಇಲ್ಲಿ ತನಗಿರುವ ಸರ್ವ ಸ್ವಾತಂತ್ರ್ಯದ ಪದವಿ ಹೇಗಿದೆ? ಇವೆರಡಕ್ಕೆ ಎಷ್ಟು ಅಂತರ? ಸತ್ಯನಾರಾಯಣರಾಯರೂ ಕುಲೀನ ರಲ್ಲವೆ? ಸಮಾಜದಲ್ಲಿ ಸ್ಥಾನವಿದೆ, ಮರ್ಯಾದೆಯಿದೆ; ಸುಖ ಜೀವನ ನಡೆಯಿಸಲು ಸಾಕಷ್ಟು ಹಣವಿದೆ. ಎಲ್ಲವನ್ನೂ ವಿವೇಕದಿಂದ, ನಿಧಾನ ವಾಗಿ ಯೋಚಿಸಬೇಕಾದ ವಿಷಯ. ಇಂಥ ಯೋಚನೆಗಳು ಕುಸುಮಳ ತಲೆಯಲ್ಲಿ ಹಾದು ಹೋದವು. ದುಡುಕಿ ಪ್ರತ್ಯುತ್ತರ ಹೇಳಬಾರ ದೆಂದು ನಿಶ್ಚಯಿಸಿ.

"ನಿಮ್ಮ ಸಲಹೆಗೆ ಯೋಚಿಸಿ ಉತ್ತರ ಹೇಳಬೇಕಾಗಿದೆ ನನ ಗೊಂದು ತಿಂಗಳ ಅವಧಿಬೇಕು'' ಎಂದು ಹೇಳಿದಳು.

"ಅವಧಿಬೇಕೆ? ತೆಗೆದುಕೊ. ಒಂದು ತಿಂಗಳೇ ಬಹಳಾಯ್ತು. ಹದಿನೈದು ದಿನಗಳು ಸಾಲದೆ?"

"ಹಾಗೇ ಮಾಡ್ರಿ. ಪದಿನೈದು ದಿನಗಳೇ ಸಾಕು.'

"ಸರಿ, ಹಾಗಾಪ್ರಿ" ಎಂದವಳ ಕೈಗಳೆರಡನ್ನೂ ಗಟ್ಟಿಯಾಗಿ ಅಮುಕಿದನು. ಅವಳು ಸುಮ್ಮನಿದ್ದುದು ಅಂಗೀಕಾರದ ಸೂಚನೆ ಯೆಂದು ಒಳಗೇ ಹಿಗ್ಗಿದರು ರಾಯರು. ಪಾಪ, ಚಪಲ!

"ಆದರೆ ಒಂದು ಕರಾರಿನ ಮೇಲೆ"

"ಮತ್ತೇನು ಷರತು, ಮಹಾರಾಯಳೆ?"

"ಏನೂ ಇಲ್ಲ, ಈ ಅವಧಿಯೊಳಗಾಗಿ ನನ್ನನ್ನು ನೀವು ಒಂದು ಸಲವಾದರೂ ಮುಟ್ಟಬಾರದು. ದೂರದಿಂದಲೇ ಮಾತನಾಡಿಸಬೇಕು" ಎಂದು ಸೂಚಿಸಿದಳು.

"ಮುಟ್ಟಿಕೊಳ್ಳೋದು ತಪ್ಪೇನು?''

''ತಪ್ಪೊ ಒಪ್ಪೊ. ನನಗೆ ಗೊತ್ತಿಲ್ಲ. ನಿಮ್ಮಲ್ಲಿ ನಿಗ್ರಹ ಶಕ್ತಿ ಯಿದೆ ಎಂದು ತಿಳಿಯದ ಹೊರತು ನಾನು ಯಾವ ಬಗೆಯ ನಿರ್ಧಾರಕ್ಕೆ ಬರುವ ಹಾಗಿಲ್ಲ. ಮದುವೆಯಾಗುವ ಸಂಭವವೂ ಇಲ್ಲ''.

''ಹೂಂ, ಆಗಲಿ. ಮತ್ತೆ ಮುಟ್ಟಿಕೊಳ್ಳೋದಿಲ್ಲ. ಇನ್ನೇನು ಸಮಾಧಾನವೆ?''

ಕುಸುಮಳು ಅನಸೂಯೆಯನ್ನು ಅಂದು ಕಲೆತಾಗ ವಿಚಾರಿಸಿದಳು. ಒಳಸಂಚಿನಲ್ಲಿ ಇವಳೂ ಸೇರಿದ್ದುದು ಕುಸುಮಳಿಗೆ ತಿಳಿದಿರಲಿಲ್ಲ. ಅನಸೂಯೆ ತನ್ನ ಗಿರಾಕಿಯನ್ನು ಹಾಳು ಮಾಡಿ ಬಲೆಯಲ್ಲಿ ಹಾಕಿಕೊಂಡಳಲ್ಲವೆಂದು ಅಸಮ್ಮತಿ ಸೂಚಿಸುವಳೆಂದು ತಿಳಿದ ಇವಳಯೋಚನೆ ಸರಿಯಾದುದಲ್ಲವೆಂದೆನಿಸಿತು. ಅನಸೂಯೆಯು ಯಾವ ನಿರ್ಬಂಧವನ್ನೂ ಸೂಚಿಸದೇ ಇದ್ದುದು ಇವಳಿಗೆ .ಆಶ್ಚರ್ಯವೆನಿಸಿತು. ಅನಸೂಯೆಗೆ ಈ ಯೋಜನೆ ಮನಸ್ಸಿಗೆ ಒಪ್ಪಿಗೆಯಾದಂತೆ ಕಂಡು ಬಂತು. ಜಗತ್ತಿನಲ್ಲಿ ನಡೆಯುತ್ತಿರುವ ಮೋಸ, ಕೃತ್ರಿಮ ವ್ಯಾಪಾರಗಳ ಅರಿವಿಲ್ಲದ ಇವಳಿಗೆ ಎಲ್ಲವೂ ನಿಜವೆಂದೇ ತೋರಿತು.

ಕುಸುಮಳ ಮನಸ್ಸು ಹಿಡಿತದಲ್ಲಿರಲಿಲ್ಲ; ಅನೇಕ ಕಡೆಯಿಂದ ನಾನಾ ಬಗೆಯ ಎಳೆತಗಳ ಸೆಳೆವಿನಲ್ಲಿ ಸಿಕ್ಕಿ ಕಲಮಲಗೊಂಡಿತ್ತು.

ಕುಸುಮಳಿಗೆ ಯಾರದಾದರೂ ಒಬ್ಬರ ಆಶ್ರಯ ಬೇಕಿತ್ತು. ಸತ್ಯನಾರಾಯಣ ರಾಯರಂತಹ ಹಣವಂತನ ಆಶ್ರಯ, ಅವರ ಮನೆಯಲ್ಲಿಯ ಅನುಕೂಲವಾದ ವಾತಾವರಣ ಇವಳ ಮನಸ್ಸಿಗೆ ಹಿಡಿದಿತ್ತು. ಸಮಾಜದಲ್ಲಿ ತನಗೆ ಸರಿಯಾದ ಸ್ಥಾನವಿಲ್ಲ. ಅನಸೂಯೆಯ ಮನೆಯಲ್ಲಿರಲು ಮನಸ್ಸೊಗ್ಗುವುದಿಲ್ಲ. ಕಾಲವೇ ಕೆಟ್ಟು ಹೋಗಿತ್ತು. ಇಂಥಾ ಪರಿಸ್ಥಿತಿಯಲ್ಲಿ ನೆರವಾಗಲು ಆತುರನಾದ ರಾಯರ ಸಹಾಯ ಬೇಡೆನ್ನುವುದು ಉಚಿತವೆನಿಸಲಿಲ್ಲ. ತನ್ನ ನಿಜವಾದ ಸ್ಥಿತಿಗೆ ಬೆಲೆ ಕೊಡುವವರಾದರೂ ಯಾರು?

ಮದುವೆಯಾಗಿಯೇ ತೀರಬೇಕೆಂಬ ಹಂಚಿಕೆ ಈಗೇಕೆ ಕುಸುಮಳಿಗೆ. ಅವಸರ ಬಿದ್ದು, ಯಾವನೋ ಇಜ್ಜೋಡಿನವನನ್ನು ಮದುವೆಯಾಗಿ ಜೀವನವನ್ನೇ ಹಾಳು ಮಾಡಿಕೊಂಡರೇನಂತೆ? ಅಂಥಾ ಅವಸರವೆಲ್ಲಿದೆ? ಮದುವೆಯಾಗದೆ ಹಾಗೆಯೇ ಕಾಲ ಕಳೆದರೇನಂತೆ? ಯಾರ ನೆರವೂ ಬೇಕಿಲ್ಲ. ತಾನೊಬ್ಬಳು ಜೀವಿಸಲು ಸಾಕಷ್ಟು ಹಣವಿದೆ. ಇರಲು ತಂದೆಯ ಮನೆ ಇದೆ. ಗಂಡನೆಂಬವನೊಬ್ಬನನ್ನು ಕಟ್ಟಿಕೊಳ್ಳಬೇಕೆಂಬ ಅವಶ್ಯಕತೆ ಎಲ್ಲಿಯದು? ಹಾಗೆಯೇ ಕಾಲಕಳೆದರೆ ಬೇಡವೆನ್ನುವವರಾರು? ನಿಧಾನವಾಗಿ ಹುಡುಕಿ ಮನಸ್ಸಿಗೆ ಬಂದವರಾರಾದರೂ

ಸಿಕ್ಕರೆ ಮದುವೆಯಾಗಬಹುದು. ಅವಸರದಿಂದ ಈಗಲೇ ನಿಶ್ಚಯಕ್ಕೆ ಬಂದರೆ ತೊಂದರೆಯಾಗಬಹುದು.

ಈ ರೀತಿ ಕುಸುಮಳ ಅವಸ್ಥೆ ತ್ರಿಶಂಕುವಿನಂತಿರಲು, ಎಲ್ಲಿಂದಲಾದರೂ ಸರಿಯಾದ ಸಹಾಯ ಸಮಯಕ್ಕೆ, ಆಗಿಯೇ ತೀರುವುದೆಂದು ಅವಳ ಮನಸ್ಸು ಹೇಳುತಿತ್ತು. ಹೊರಗಿನ ಸಹಾಯ ಬಂದೇ ತೀರುವುದೆಂದು ಅವಳ ನಂಬಿಕೆಯಿತ್ತು. ಕೂಡಲೇ ನಿರಾಶೆ ಪಡುವ ಕಾರಣವಿದ್ದಿಲ್ಲ ವೆಂದು ಅವಳು ನೆನೆದಳು.

ಮನುಷ್ಯರಿಗೆ ಕಷ್ಟಗಳು ಬಂದವೆಂದರೆ ಅವರ ಆಧ್ಯಾತ್ಮಿಕ ಬಲವು, ಕಡಮೆಯಾಗಬಹುದು. ಮಾನವನು ಪರಮಾತ್ಮನನ್ನು ನಿಂದಿಸಲು ಮುಂದೆ ಬರಬಹುದು. ದೇವರು ಹೀಗೆ ಕಷ್ಟಗಳ ಹೊರೆಯನ್ನು ತಂದೊಡ್ಡುವುದು ನ್ಯಾಯವೆ, ಎಂದು ತರ್ಕಿಸಬಹುದು. ದೇವರಲ್ಲಿ ನಂಬಿಕೆ ಕಡಮೆಯಾಗ ಬಹುದು. ಆದರೆ ಅದೇ ಕಷ್ಟಗಳೇ ಮಾನವ ಸ್ವಭಾವದ, ನಡತೆಯ, ಪರೀಕ್ಷೆಯ ದಿನಗಳೆಂದು ತಿಳಿದವನಿಗೆ, ಇವುಗಳ ನಿಜವಾದ ಅರಿವು ಉಂಟಾಗಿ, ದೇವರಲ್ಲಿ ನಂಬಿಕೆ ಹೆಚ್ಚುವುದು. ಕಷ್ಟದ ದಿನಗಳು ಕಳೆದ ನಂತರ ಸುಖ ಬಂದೇ ತೀರುವುದೆಂಬ ಪ್ರಕೃತಿ ನಿಯಮ ತಿಳಿದವನು ಸಮಾಧಾನ ಹೊಂದುವನು.

ಹಿಂದೆ ತಂದೆಯವರು ಮದುವೆಯ ಮಾತನ್ನೆತ್ತಿದಾಗ ಆವೇಶದಲ್ಲಿ ಹೇಳಿದ ಮಾತುಗಳನ್ನು ಕುಸುಮಳು ನೆನಪಿಗೆ ತಂದುಕೊಂಡಳು. ಅನು ರೂಪನೂ ವಯಸ್ಕನೂ, ಗುಣವಂತನೂ ಆದ ವರನು ದೊರೆಯದೇ ಹೋದರೆ ಮದುವೆ ಮಾಡಿಕೊಳ್ಳದೇ ಹಾಗೆಯೇ ಇದ್ದು ಬಿಡುವೆನೆಂದು ಹೇಳಿದ್ದಳು. ಆ ಮಾತುಗಳ ನಿಜಾಂಶವೇನು? ಈಗ ನಡೆಯಬೇಕಾದ ವಿಷಯವೇನು? ಎಷ್ಟು ಅಂತರ? ಸತ್ಯನಾರಾಯಣರಾಯರನ್ನೇ ಮದುವೆ ಯಾಗಬೇಕೆ? ದೇವರು ಇವನನ್ನೇ ಗಂಟು ಹಾಕಬೇಕೆಂದು ನಿರ್ಧರಿ ಸಿರುವನೆ? 'ಮದುವೆ' ಎಂಬ ಮಾತು ತಿಳುವಳಿಕೆಯ ಹುಡುಗಿಗೆ ಸಂತೋಷವನ್ನುಂಟುಮಾಡಬೇಕು. ಆದರೆ ಇದೇನು, ಈಗ ಅದನ್ನು ನೆನೆದರೆ ಮನಸ್ಸಿಗೇಕೆ ವೇದನೆ? ಎಂತಹ ವೇದನೆ ಮನಸ್ಸಿಗೆ!

ಸರಿಯಾದ ವರನನ್ನು ಕುಸುಮಳು ಹುಡುಕಿದಳೆ? ಹುಡುಕಿದರೆ ಸರಿವಯಸ್ಸಿನ ಹುಡುಗರು ಸಿಗುವರೇನು? ವಿಧಿ ಲಿಖಿತದಂತೆ, ನಿರ್ಮಿಸಿದ

ನಿಯಮದಂತೆ ಎಲ್ಲವೂ ನಡೆಯುವುದು. ಮಾನವನು ವಿಧಿಯ ಕೈ ಗೊಂಬೆಯಲ್ಲವೆ? ತನಗೆ ಬೇಕಾದ ವರನನ್ನು ಹುಡುಕುವುದಾದರೂ ಹೇಗೆ? ಆಗಲಾರದ ಮಾತು. ವಿಶಾಲವಾದ ಪ್ರಪಂಚದಲ್ಲಿ ವರನನ್ನು ಎಲ್ಲಿ ಹುಡುಕಬೇಕು? ಅರಿಸಿದರೆ ಸಿಗುವ ಪದಾರ್ಥವೆ? ಇಂತಹ ಸಂಕಟ ಸಮಯದಲ್ಲಿ ಆಪ್ತಳೆಂದು, ತನ್ನವಳೆಂದು, ಮಮತೆಯಿಂದ ಸಲಹೆಗಳ ನ್ನೀಯುವವಳೆಂದರೆ, ಅನಸೂಯಳೊಬ್ಬಳೇ. ಈ ಬಿಕ್ಕಟ್ಟಿನ ಸಂದರ್ಭ ದಲ್ಲಿ ತನ್ನಂತೆ ಸಂಸ್ಕಾರವುಳ್ಳ, ತನ್ನ ನಿಜಸ್ಥಿತಿಯನ್ನು ತಿಳಿದು ಸಲಹೆ ಸೂಚನೆಗಳನ್ನೀಯಲು ಸರಿಯಾದ ಆಪ್ತರಾರೂ ಇರಲಿಲ್ಲ. ಕುಸುಮಳ ಆಗಿನ ಪರಿಸ್ಥಿತಿ ಬಹಳ ಶೋಚನೀಯವಾಗಿತ್ತು.

ಪ್ರಭಾಕರನೆಲ್ಲಿರುವನು? ಅವನ ವಾಗ್ದಾನವೇನಾಯಿತು? ತನ್ನನ್ನು ಮರೆತು ಬಿಟ್ಟನೆ? ಅವನು ಮರೆಯುವುದೂ ತನ್ನ ದುರ್ದೈವವೇ ಸರಿ. ಅಥವಾ ತನ್ನ ಕೆಟ್ಟ ಜಾತಕದ ಪ್ರಭಾವವೋ? ಅವನಿಗೆ ಬರೆದ ಮೂರು ಕಾಗದಗಳ ಗತಿ ಏನಾಯಿತು? ಕಾಂತರಾಯನಿಗೆ ಬರೆದ ಪತ್ರಗಳಿಗೂ ಮಾರುತ್ತರವಿಲ್ಲ. ಸ್ವಲ್ಪೇ ಪರಿಚಯದಲ್ಲಿ ಅವರು ಬಹಳ ಒಳ್ಳೆಯವರೆಂದು. ತನ್ನ ಆಪ್ತ ಸ್ನೇಹಿತರೆಂದು ನಿರ್ಣಯಕ್ಕೆ ಬಂದುದು ತಪ್ಪೆಂದು ಕಂಡು ಬಂತು. ಅವರು ಕುಲೀನರು, ನಾನು ಕುಲವಿಲ್ಲದ ಹೆಣ್ಣು; ಎಷ್ಟು ಅಂತರ? ಇಬ್ಬರ ನಡುವೆ ಇಷ್ಟು ಅಂತರವಿರುವಾಗ ಅವರಿಂದ ಸಹಾಯ ಆಶಿಸಿದುದು ತನ್ನದು ಮಹಾಪರಾಧವಾಗಿ ಹೋಯಿತೆಂದು ಭಾವಿಸಿದಳು.

ಈ ರೀತಿಯಲ್ಲಿ ಕುಸುಮಳು ಮಾನಸಿಕ ಹೊಯ್ದಾಟಕ್ಕೆ ಸಿಕ್ಕು ಸರಿಯಾದ ನಿರ್ಧಾರಕ್ಕೆ ಬರಲಾಗಲಿಲ್ಲ. ಯೋಚಿಸಿದಂತೆಲ್ಲ ಪರಿಹಾರವೇ ತೋರಲಿಲ್ಲ. ಮುಂದೇನು ನಿರ್ಧರಿಸಬೇಕೆಂಬ ಯೋಚನೆ ಇವಳನ್ನು ಬಾಧಿಸತೊಡಗಿತು. ರಾತ್ರಿ ಊಟ ಸಹಿಸಲಿಲ್ಲ. ಕೋಣೆಯಲ್ಲಿ ಒಬ್ಬಳೇ ಅತ್ತು ಬಿಟ್ಟಳು. ಅಳುವುದೆಷ್ಟು? ತನಗಾರು ದಿಕ್ಕು? ದಿಕ್ಕಾರು? ಯಾರೂ ಇಲ್ಲ? ಮರಣಹೊಂದಿದ ತಂದೆ ತಾಯಿಗಳ ಆತ್ಮಗಳೂ ದೂರಾದವೇ? ಬಹುದೂರ ಸರಿದವೆ? ವಿಶಾಲವಾದ ಪ್ರಪಂಚದಲ್ಲಿ ಇವಳಿಗೆ ಬಕ್ಕನೆತ್ತಿಯ, ಇಳಿ ವಯಸ್ಸಿನ, ಮುದಿಯ ಸತ್ಯನಾರಾಯಣ ರಾಯನ ಹೊರತು ಯಾರ ನೆರವೂ ದೊರೆಯಲಾರದೆ? ಕುಸುಮಳ

ಪ್ರೇಮ ಬಿಕ್ಷೆಗೆಲ್ಲಿದೆ ಶಾಂತಿ? ಇಂಥವನಿಂದಲೇ ಶಾಂತಿ ದೊರೆಯಬೇಕೆ? ಪ್ರಪಂಚವು ಕುರುಡಾಗಿದೆ; ಮಾಯೆಯಲ್ಲಿ ಮುಳುಗಿದೆ. ನಿಜವಾದ ಪ್ರೇಮದ ಕಡೆಗೆ, ಆಸರ ದೊರೆಯುವುದೆಲ್ಲಿ? ಹೀಗೆ ಯೋಚಿಸುತ್ತಿರುವಾಗ ರಾತ್ರಿ ಹನ್ನೆರಡು ಹೊಡೆದಿತ್ತು.

" ಅಳಿಯದು, ಅಳಿಯದು ಅಳಿಯದು ಪ್ರೇಮಾ
ನಿಜವಿದು ತಿಳಿನೀ ಹರುಷದಿ ಗೆಳೆಯಾ "

ಈ ಸಾಲನ್ನೊಳಗೊಂಡ ಹಾಡನ್ನು ಹಿಂದಿನ ಲಾಡ್ಜಿನಲ್ಲಿ ಯಾರೋ, ನಿಶ್ಚಲವಾದ ಧ್ವನಿಯಲ್ಲಿ ಹಾರ್ಮೋನಿಯಂ ಪಿಟೀಲುಗಳ ಜತೆಗೆ ಹಾಡುವುದು ಕೇಳಿಸಿತು. ಆ ಕೊರಳಿನ ಪರಿಚಯ ತನಗಿದ್ದಂತೆ ಭಾಸವಾಯಿತು. ಹಾಡುವವರು ಎಷ್ಟು ಸರಳವಾಗಿಯೂ, ಶಾಂತಚಿತ್ತದಿಂದಲೂ ಹಾಡುತ್ತಿರುವರು? ಪರಿಚಯದವರೆ? ಛೀ. ಇಂಥ ಹೊಸ ಊರಿನಲ್ಲಿ ತನಗಾರು ಪರಿಚಿತರು? ಈಗಾಗಲೇ ಪರಿಚಿತರಾದ ಪ್ರಭಾಕರ, ಕಾಂತರಾಯರುಗಳ ಸುಳಿವೇ ಇಲ್ಲ. ಇನ್ನು ಆ ಮುದಿಯ ಬಿಟ್ಟರೆ ಅನಸೂಯ. ಆ ಹಾಡಿನ ಮುಂದಿನ ಭಾಗವು ಅವಳ ಹೃದಯವನ್ನು ಕಲಮಲಗೊಳಿಸಿತು.

ಲಾಡ್ಜಿನಲ್ಲಿ ಹಾಡಿದ ಭಾವಗೀತೆಯ ಪೂರ್ಣ ವಿವರ ಹೀಗಿತ್ತು:-

ಅಳಿಯದು, ಅಳಿಯದು, ಅಳಿಯದು ಪ್ರೇಮಾ
ನಿಜವಿದು, ತಿಳಿನೀ, ನಿರುತದಿ, ಗೆಳೆಯಾ॥

ಪ್ರೇಮ ರಾಜ್ಯವೇ ಸೌಖ್ಯದ ಲೋಕವು
ಪ್ರೀತಿಯಿಂದಲೇ ಕಟ್ಟಿದ ತೋಟವು
ಪ್ರೇಮಿಗಳೆಲ್ಲರು, ವಾಸಿಪ ಬೀಡದು,
ನಾವಿರುತಲ್ಲಿಯೆ ಸುಖವನು ಸವಿಯುವ

ವಿರಹವೇದನೆ ಇಲ್ಲದ ತಾಣದು
ಸುಖಭೋಗಗಳಿಗೆ ಆಸರನೆಲವದು.
ಕಷ್ಟದ ನೆನಪದು ಬಾರದು ಅಲ್ಲೀ,
ಎಂದಿಗು ಹರುಷವು ರಾಜಿಪುದಲ್ಲೀ.

ಅಮರವಮುದದೂ ನಮ್ಮೀ ಜೀವನ
ಪ್ರೇಮಮಯದಾ ಸ್ವರ್ಗವು ಆಗಿರೆ,
ದುಃಖಕಷ್ಟಗಳ ಮರೆಯುತೆ ನಾವಿದೊ
ಪ್ರೀತಿಯ ಲೋಕವ ತಪ್ಪದೆ ಸೇರುವ.

೧೨

"ಇಂದು ನಮ್ಮ ಕಂಪನಿಯ ನಾಟಕ. ಸಾಯಂಕಾಲ ನೀನು, ನಿಮ್ಮ ಅನಸೂಯೆ, ನಮ್ಮ ಮನೆಗೆ ಬಂದುಬಿಡಿ. ರಾತ್ರಿ ಅಲ್ಲೇ ಊಟ ಮಾಡಿ, ಎಲ್ಲರೂ ಸೇರಿ ನಾಟಕಕ್ಕೆ ಹೋಗಿ ಬಿಟ್ಟರಾಯಿತು" ಎಂದು ಸೂಚಿಸಿದ ಸತ್ಯನಾರಾಯಣರಾಯ ಕುಸುಮಳಿಗೆ.

ಹಾಗೇ ಆಗಬಹುದೆಂದು ಒಪ್ಪಿಕೊಂಡಳು ಕುಸುಮ. ನಾಟಕಕ್ಕೆ ಹೋಗುವೆವೆಂಬ ಸಮಾರಂಭದಲ್ಲಿ ವ್ಯೈಮರೆತು ಸಂತೋಷದಿಂದ ಕುಣಿಯ ಹತ್ತಿದರು ಹುಡುಗರು. "ಹೀಗೆ ಗಲಾಟೆ ಮಾಡಬೇಡಿ. ಹೊರಗೆ ಹೋಗಿ ಆಡಿಕೊಳ್ಳಿ" ಎಂದು ಕೂಗಿಕೊಂಡು ಹುಡುಗರನ್ನು ಹೊರಗೆ ಹಾಕಬೇಕೆಂದ ಮಾತಿಗೆ ಕುಸುಮಳು "ಇರಲಿ ಬಿಡ್ರಿ. ಅವ ರನ್ನು ಸ್ವಲ್ಪ ಓದಿರೆಂದು ಹೇಳುತ್ತೇನೆ. ನಿನ್ನೆ ಹೇಳಿದ ಪಾಠ ಒಪ್ಪಿಸ ಬೇಕಾಗಿದೆ, ಅವರು" ಎಂದು ಅವರ ಘೋರಣೆಯನ್ನು ತಡೆದಳು.

"ಸಾಕು ಬಿಡು. ಎಷ್ಟು ಓದಬೇಕವರು? ಯಾವಾಗಲೂ ಓದು, ಓದೆಂದು ಕೆಟ್ಟು ಹೋಗ್ಯಾರೆ ಹುಡುಗರು" ಎಂದು ಅವನದೇ ಸರಣಿ ಯಲ್ಲಿ ಮತ್ತೆ ಕೂಗಿಕೊಂಡ ರಾಯನು.

"ನಾವು ಪಾಠ ಕಲಿತೇವಪ್ಪಾ" ಎಂದು ಹೇಳಿ ಕೊಂಡವು ಹುಡು ಗರು.

"ಓದಿ ಬಹಳ ದಣಿದರಿ. ಸಾಕು ನಡೀರಿ, ಇನ್ನು" ಎಂದು ಹೇಳಿ ಹುಡುಗರನ್ನು ಹೊರಗೆ ಕಳಿಸಿಬಿಟ್ಟ ರಾಯನು ಬಲವಂತದಿಂದ.

ನಿಧಾನವಾಗಿ ಸತ್ಯನಾರಾಯಣರಾಯನ ಕಡೆ ನೋಡುತ್ತ.

"ಹೀಗೆ ಮಾಡಿದರೇನೆಂತ ಅರ್ಥ? ಹುಡುಗರನ್ನು ಯಾಕೆ ಹೊರಗೆ ಕಳಿಸಿದಿರಿ?" ಎಂದು ಕುಸುಮಳು ಕೇಳಿದಳು.

ಈ ಮಾತುಗಳು ರಾಯರಿಗೆ ಸ್ವಲ್ಪ ಧೈರ್ಯ ತಂದು ಕೊಟ್ಟವು. ಮತ್ತೆ ಕುಸುಮಳ ಎರಡು ಕೈಗಳನ್ನು ಹಿಡಿದು 'ಅಲ್ಲಾ ಕುಸುಮ, ಹದಿ ನೈದು ದಿನಗಳ ಅವಧಿ ಎಂದು ಸುರಳೀತ ಹೇಳಿ ಬಿಟ್ಟ. ಒಂದು ವಾರಾ

ಕಳಿಯೋದು ನನಗೆ ಯುಗಾ ಕಳೆದ ಹಾಗಾಯ್ತು. ಹ್ಯಾಗ ಇನ್ನೊಂದು ವಾರ ಕಾಯಬೇಕೆಂದು ಯೋಚನೆ ಆಗೇದೆ” ಎಂದು ಬೇಡಿಕೊಂಡ.

“ಒಂದು ವಾರ? ಯಾಕೆ, ಮತ್ತೆ ಇನ್ನೂ ಎರಡು ವಾರಾಂತ ನಿಮಗೆ ಗೊತ್ತಿಲ್ಲೇನು?” ಎಂದು ಸೂಚಿಸಿದಳು ಶಾಂತ ರೀತಿಯಿಂದ ಕುಸುಮಳು.

“ಅದ್ಯಾಕೆ? ಮತ್ತೆ ಎರಡು ವಾರ ಏಕೆ? ನೀನು ಕೇಳಿದ್ದು ಹದಿನೈದು ದಿನಾ ಅಲ್ಲೇನು?”

“ಆದರೇನಾಯಿತು? ನನ್ನ ಕೈಯಾಕೆ ಹಿಡಿದಿರಿ ಮತ್ತೆ? ಮದುವೆಯ ವಿಷಯ ಏತಕ್ಕೆತ್ತಿ ಕೇಳಿದಿರಿ? ಮತ್ತೆ ಹದಿನೈದು ದಿನಗಳು ಮುಂದೆ ಹಾಕಬೇಕಾದೀತು ನೀವೀ ರೀತಿ ನನ್ನ ಕೈ ಹಿಡಿದು ಪೀಡಿಸಿದ್ರೀ ಅಂದ್ರೆ”.

“ನಿನ್ನ ಕೊಂಕುಚೇಷ್ಟೆ ಸಾಕು. ನಿನಗೆ ಆಟ ನನಗೆ ಪ್ರಾಣ ಸಂಕಟ. ನಿನಗೇನು ಗೊತ್ತು ನನ್ನ ಅವಸ್ಥೆ? ನೀನೀಗ ಆಡೋ ಮಾತಿನೊಳಗೇನಾದರೂ ಬೇರೇ ಅರ್ಥ ಆದೇನು ಹೇಳು? ಸುಮ್ಮನೇ ನಾನು ಸಂಕಟಪಡಬೇಕಾಗಿದೆ.”

“ಕರಾರನ್ನು ಮಾತ್ರ ನಿಮಗೆ ನೆನಪಿಗೆ ತಂದು ಕೊಟ್ಟರೆ ನೀವೇನೋ ಬೇರೆ ಅರ್ಥಾಗಿರ್ಥಾಂತ ಮಾತಾಡಿದರೆ ನಾನೇನು ಮಾಡಲಿ? ನನ್ನ ಕರಾರಿಗೆ ನೀವು ಒಪ್ಪಿದಿರಿ. ಅದರಂತೆ ನೀವು ನಡದೇ ತೀರಬೇಕು ಅದೇ ಕರಾರನ್ನು ಈಗ ಮುರಿದಿರಿ. ತಪ್ಪು ಯಾರದು?”

“ಕುಸುಮಾ, ನನ್ನ ಸ್ಥಿತಿ ಏನೂಂತ ಹೇಳಲಿ. ಇಷ್ಟ್ಯಾಕೆ ಕಲ್ಲಾಯಿತು ನಿನ್ನ ಮನಸ್ಸು? ಹದಿನೈದು ದಿನಾಂತ ಕೇಳಿದಿ; ನಿಜ. ಅಷ್ಟು ದಿನಾ ಆದ ಮೇಲೆ ಮದುವೆ ಆಗುವುದಿಲ್ಲಾಂತ ನಿರಾಶೆಯ ಉತ್ತರವನ್ನಿತ್ತರೆ ನಾನೇನು ಮಾಡಲಿ? ನನ್ನ ಹೃದಯದ ವೇದನೆಯ ಅರಿವು ನಿನಗಿನ್ನೂ ಆಗಿಲ್ಲ. ನನ್ನ ನಿಜಸ್ಥಿತಿ ನಿನಗಿನ್ನೂ ತಿಳಿದಿಲ್ಲ. ನಾನೇನು ಮಾಡ್ಲಿ ಹೇಳು? ಹೀಗ್ಯಾಕೆ ಗೋಳಾಡಿಸುತ್ತೀ? ನಾನೇನು ಪಾಪ ಮಾಡೀನಿ? ನಿನ್ನ ಮ್ಯಾಲೆ ನನಗೆ ಪ್ರೀತಿ, ವ್ಯಾಮೋಹ ಉಂಟಾಗಿರೋದು ತಪ್ಪೇನು? ಇದೆಂತಹ ಅನ್ಯಾಯ? ಮದುವೆಯಾಗ್ತೀನೀಂತ ಮಾತು ಕೊಟ್ಟು ಬಿಡು.

ಎಷ್ಟು ದಿನ ಬೇಕಾದರೂ ಕಾಯ್ತೀನಿ. ನಿನ್ನ ಮುಟ್ಟಿ ಕೊಳ್ಳದಲೇ ಒಂದು ತಿಂಗಳು ಬೇಕಾದರೆ ಇರ್ತೀನಿ. ಈ ಮಾತಿಗೆ ತಪ್ಪಿ ನಡದರೆ ಕೇಳು ಆಗ."

ಈ ಮಾತಿನಿಂದ ಕುಸುಮಳಿಗೇನೂ ಕೋಪ ಬರಲಿಲ್ಲ. ಆ ಮುದುಕನ ತಪ್ಪೇನೆಂಬುವುದನ್ನು ವಿವರಿಸಿ ಹೇಳಿದಳು.

"ನಾನು ಹದಿನೈದು ದಿನಗಳ ನಂತರ ನಿಮ್ಮನ್ನು ನಿರಾಕರಿಸುತ್ತೇನೆ ಎಂಬ ಸಂಶಯದಿಂದ ಈಗಲೇ ಎಷ್ಟು ಗಿಟ್ಟಿದರೆ ಅಷ್ಟೇ ಸಾಕೆನ್ನುವ ಅಲ್ಪ ಸಂತೋಷದ ಮಾತೆಂದು ಮುಟ್ಟಿ ಮಾತಾಡ್ತೀರೇನು? ನೀವು ಸುಮ್ಮನೇ ಹಣಾ ಸುರುವಿ ಹೆಂಗಸರ ಕಾಮುವನ್ನು ಕೊಳ್ಳುವ ಪರಿವಾತ ಉಳ್ಳವರೇ ಹೊರತು ಹೆಂಗುಸರನ್ನು ವಶಮಾಡಿಕೊಳ್ಳುವ ವಿದ್ಯೆ ಸರಿಯಾಗಿ ತಿಳಿದುಕೊಂಡಿಲ್ಲ."

"ಎಂಥಾ ಕಲ್ಲೇ ನಿನ್ನ ಮನಸ್ಸು. ನಿಜವಾಗಿ ರಾಕ್ಷಸಿಯೇ ನೀನು."

"ನಾನು ಮಾರೀಚ ಸ್ವಭಾವದವಳೇ. ಬಿಟ್ಟುಬಿಡಿ. ನನ್ನ ಗೊಡವೆ ನಿಮಗೇತಕ್ಕೆ? ಹೀಗೆಲ್ಲಾ ಆಗಬೇಕು, ನಿಮ್ಮ ಮನಸ್ಸು ಸರಿಯಾಗಿ ತಿಳಿಯಬೇಕು, ನಿಮ್ಮ ವರ್ತನೆ ಎಂತಹದೆಂಬುದು ಗೊತ್ತಾಗಬೇಕು. ಎಲ್ಲವೂ ತಿಳಿದ.ಕೊಂಡ ನಂತರ ನಿಮ್ಮ ಮನಸ್ಸೆಂಥಾದ್ದೂ ಎಂಬೋದು ತಿಳಿಯಬೇಕೆಂದೇ, ನಾನು ಹದಿನೈದು ದಿನದ ಅವಧಿ ಕೇಳಿದೆ. ನನ್ನನ್ನು ನೀವೂ ಪೂರ್ಣ ಪರೀಕ್ಷೆ ಮಾಡಿದಂತಾಗುವುದು. ಇನ್ನೇನು, ಒಂದು ವಾರಾ ತಾನೆ? ಸುಮ್ಮನೇ ಇದ್ದು ಬಿಡ್ರಿ. ನನ್ನಲ್ಲಿ ಇನ್ನೆಷ್ಟು ದುರ್ಗಣಗಳನ್ನು ಕಾಣುವಿರೋ?"

"ಮಹಾರಾಯಳೆ, ಸುಮ್ಮನಿರು. ಮಾಡಿದ ತಪ್ಪಿಗೆ ಗಲ್ಲಗಲ್ಲಾ ಬಡಕೊಂತೀನಿ. ನೀನೆಂಥವಳಾದರೇನು? ನನಗೆ ಬೇಕಾದುದು ನೀನು?"

"ಇದಕ್ಕೇ ಗಂಡುಸರ ಪಾತಿವ್ರತ್ಯನೇವಾ ಅಂತಾರೇನು? ನನ್ನನ್ನು ನೋಡಿ, ನನ್ನ ಶರೀರ ಸೌಂದರ್ಯವನ್ನು ಕಂಡು, ಅದನ್ನು ಮಾತ್ರ ಬೇಡುವವರೇನೋ? ಆ ಶರೀರವು ಎಂಥಾ ನೀಚ ಕೆಲಸಗಳನ್ನು ಮಾಡುತ್ತಲಿದ್ದರೂ ನಿಮಗದರಿಂದ ತೊಂದರೆ ಇಲ್ಲವೆಂದಾಯಿತು. ನನ

ಗಾದರೂ ಮತ್ತಿನ್ನೇನು ಬೇಕು?" ಎಂದು ಹಾಸ್ಯದ ಸರಣಿಯಲ್ಲಿ ಚುಚ್ಚಿ ಮಾತನಾಡಿದಳು.

ಸತ್ಯನಾರಾಯಣರಾಯನು ಅವಳನ್ನು ದುರದುರನೆ ನೋಡುತ್ತ "ಹೀಗ್ಯಾಕಾಯ್ತು ಇವತ್ತು ನಿನ್ನ ಅವಸ್ಥೆ?" ಎಂದು ಕೇಳಿದ.

ಕುಸುಮಳು ಎದ್ದು ನಿಂತು ಕೋಣೆಯಲ್ಲಿ ಅವಸರದಿಂದ ಅತ್ತಿಂದಿತ್ತ ಓಡ್ಯಾಡ ತೊಡಗಿದಳು. ಪಶುಪ್ರಾಯನಾದ ರಾಯನಲ್ಲಿ ಇವಳಿಗಾವ ಅನುರಾಗವೂ ಇರಲಿಲ್ಲ. ಇನ್ನೊಂದು ವಾರದಲ್ಲಿ ಇವನಿಗೆ ಸರಿಯಾದ ಉತ್ತರ ಹೇಳಿಯೇ ತೀರಬೇಕಾಗುವುದು. ಇವನ ಹಠಮಾರಿತನಕ್ಕೆ ಏನಾದರೊಂದು ಉಪಾಯ ಹುಡುಕಲೇ ಬೇಕಾಗುವುದು. ಇವನ ಬಲೆಯಲ್ಲಿ ಬಿದ್ದರೆ ತನ್ನ ಆದರ್ಶಗಳೆಲ್ಲ ಹಾರಿಹೋಗುವವಲ್ಲವೆ? ತಂದೆ ತಾಯಿಗಳ ಮುಂದೆ ಅಂದು ತಾನು ಆಡಿದ ಮಾತುಗಳ ಅರ್ಥವೇನು? ಪ್ರಭಾಕರ, ಕಾಂತನ ಮುಂದೆ ತನ್ನ ಭಾವೀ ಜೀವನದ ಬಗ್ಗೆ ತರ್ಕಿಸಿ ಕಟ್ಟಿದ ನವಿಗನಸಿನ ಗೋಪುರಗಳ ಗತಿಯೇನು? ಅವರೆಲ್ಲಿರುವರು ಈಗ? ತಾನೆಲ್ಲಿರುವೆನು? ಈ ಬಲೆಯಿಂದ ಪಾರಾಗುವ ಬಗೆ ಹೇಗೆ? ಒಂದೆರಡು ನಿಮಿಷಗಳಲ್ಲಿ ಇಷ್ಟೆಲ್ಲ ಯೋಚನೆಗಳು ಕುಸುಮಳ ತಲೆಯಲ್ಲಿ ಹಾದು ಹೋದವು. ಸ್ವಲ್ಪ ಚೇತರಿಸಿಕೊಂಡು ಸಂಜೆಗೆ ಬರುವೆನೆಂದು ಹೇಳಿ ಅನಸೂಯಳನ್ನು ಕಾಣಲು ಹೊರಟಳು....

ಎಂಟೂವರೆಗೆ ನಾಟಕ ಮಂದಿರದ ಹತ್ತಿರ ಗೊಂದಲವೇ ಗೊಂದಲ. ಜನಸಂದಣಿ ಹೆಚ್ಚು. ತಿಂಡಿ ತಿನಸುಗಳನ್ನು ಮಾರುವವರ ಕೂಗುಗಳು, ಸೋಡಾ ಬಾಟ್ಲಿಗಳ ಕರ್ಕಶ ಧ್ವನಿ, ಸಿಗರೇಟು ಮಾರುವವರ ಚೀರಾಟದ ಸ್ವರ, ಜನರ ಆರ್ಭಟವೆಲ್ಲವೂ ನಾಟಕದ ಮಂದಿರದ ಮುಂದೆ ಒಂದು ಬಗೆಯ ಶೋಭೆಯನ್ನುಂಟುಮಾಡಿದ್ದವು.

ಈ ಜನರೆಲ್ಲರೂ ಕಂಪನಿಯ ಹೆಸರಿಗಾಗಿ ಬಂದು ಸೇರಿದ್ದಲ್ಲ. ನಾಟಕದ ಬಗ್ಗೆ ಸಾಕಷ್ಟು ಒಳ್ಳೇ ರೀತಿಯಲ್ಲಿ ಪ್ರಚಾರ ನಡೆದಿತ್ತು. ದಿನಪತ್ರಿಕೆಗಳಲ್ಲಿ ಜಾಹಿರಾತುಗಳು ಮೇಲಿಂದ ಮೇಲೆ ಬಂದಿದ್ದವು. ಊರಲ್ಲಿ ಜನಸಂದಣಿಯ ಸ್ಥಳಗಳಲ್ಲಿ, ಮಾರ್ಕೆಟು, ರೈಲು ನಿಲ್ದಾಣ, ಮೋಟಾರು ಸ್ಟ್ಯಾಂಡು, ಸಿನೇಮಾ ಮಂದಿರಗಳ ಮುಂದೆ, ಎಲ್ಲಾ ಮುಖ್ಯ

ಸ್ಥಳಗಳಲ್ಲಿ ದೊಡ್ಡ ದೊಡ್ಡ ಬ್ಯಾನರುಗಳನ್ನು ಇರಿಸಿದ್ದರು. ಇದರಲ್ಲಿ ಕಾಂತರಾಯನು ಹೆಚ್ಚು ದಕ್ಷತೆಯಿಂದ ಕೆಲಸಮಾಡಿದ್ದನು. ಯಾವ ಕಾರಣದಿಂದಲೋ ನಾಟಕದ ಪಾತ್ರ ವಹಿಸುವವರ ಹೆಸರುಗಳನ್ನು ಮಾತ್ರ ಪ್ರಕಟಿಸಿದ್ದಿಲ್ಲ. "ಹೊಸ ನಟರು — ಹೊಸ ತರಹದ ನಟನೆ— ಪ್ರಗತಿಪರ ನಾಟಕ ಸೊಗಸಾದ ಸಂಗೀತ—ಹೊಸ ಸೀನರಿಗಳು—" ಮುಂತಾಗಿ ಸೂಚನೆ ಕೊಟ್ಟಿದ್ದನೇ ಹೊರತು ಹೆಚ್ಚಿನ ವಿವರಗಳು ತಿಳಿಸಿರಲಿಲ್ಲ. ಈ ರೀತಿ ಪಬ್ಲಿಸಿಟಿಯ ಮಹತ್ವದಿಂದ, ಜನರು ಗುಂಪು ಗುಂಪಾಗಿ ನೆರೆದಿದ್ದರು. ಬಹಳ ದಿನಗಳಿಂದ ನಿಂತು ಹೋದ ನಾಟಕ ಕಂಪೆನಿ ಹೊಸ ಆಡಳಿತದಲ್ಲಿ ಹೇಗಿರುವುದೆಂದು ನೋಡುವ ಕುತೂಹಲ ದಿಂದ ಕೆಲವರು ನೆರೆದಿದ್ದರು. ಆ ಊರಲ್ಲಿ ನಾಟಕಗಳನ್ನು ಆಡದೆ ಬಹಳ ದಿನಗಳಾಗಿದ್ದವು. ನೋಡೋಣವೆಂದು ಸೇರಿದ್ದರು ಇನ್ನಿತರ ನಾಟ್ಯವಿಲಾಸಿಗಳು. ಇದರ ಮೇಲೆ ಉತ್ತಮವಾದ ಪ್ರಚಾರ. ಕೇಳ ಬೇಕೆ? ನಾಟಕ ಆರಂಭಿಸುವುದಕ್ಕಿನ್ನೂ ಒಂದು ಗಂಟೆ ಇರುವಾಗಲೇ ಎಲ್ಲಾ ಬಗೆಯ ಟಿಕೇಟುಗಳು ತೀರಿ ಹೋಗಿದ್ದವು. ಹೌಸ್ ಫುಲ್.

ಅನಸೂಯೆ, ಕುಸುಮರನ್ನು ನಾಟಕ ಮಂದಿರದಲ್ಲಿ ಮುಂದಿನ ಸಾಲಿನಲ್ಲಿ ಸತ್ಯನಾರಾಯಣ ರಾಯರು ಜಾಗಾಮಾಡಿ ಕೊಟ್ಟು, ಬುಕ್ಕಿಂಗ್ ರೂಮಿಗೆ ಬಂದು ನೋಡಲು ಕಾಂತರಾಯನು ಟಿಕೇಟು ಮಾರುವುದನ್ನೇ ನಿಲ್ಲಿಸಿ ಬಿಟ್ಟಿದ್ದನು. ಹೆಚ್ಚು ಟಿಕೇಟುಗಳನ್ನು ಮಾರುವುದರಿಂದ ಕಂಪೆನಿಯ ಹೆಸರು ಕೆಡುವುದೆಂಬ ಯೋಚನೆಯಿಂದ ನಿಲ್ಲಿಸಿ ಬಿಟ್ಟಿದ್ದೇನೆ ಎಂದು ಹೇಳಿದ ಮಾತಿಗೆ ಸತ್ಯನಾರಾಯಣ ರಾಯನು ಸುಮ್ಮನಿದ್ದನು. ಅಂದಿನ ನಾಟಕಕ್ಕೆ ಒಂದು ಸಾವಿರ ರೂಪಾಯಿಗಳು ಟಿಕೇಟಿನ ಹಣ ಬಂದಿದೆ ಎಂಬ ಮಾತು ಕೇಳಿ ಹಿರಿ ಹಿರಿ ಹಿಗ್ಗಿದನು. ದಿವಾಳಿ ತೆಗೆಯ ಬೇಕಾದ ಕಂಪನಿಯು ಅಳಿಯದೇ ಉಳಿಯಿತಲ್ಲಾ, ತನ್ನ ಹೆಸರು ಕೆಡ ಲಿಲ್ಲವಲ್ಲವೆಂಬ ವಿಷಯ ರಾಯರನ್ನು ಸಂತೋಷಗೊಳಿಸಿತು. "ಏನಾದ್ರೂ ಮಾಡಪ್ಪ. ಎಲ್ಲಾ ನಿಂದೇ ಎಂಥಾ ಸಾಹಸ ನಿಂದು? ನಾಲ್ಕು ವರು ಷಾಯ್ತು ಹೀಗೆ ಜನಸೇರಿ ನಮ್ಮ ನಾಟಕಕ್ಕೆ. ಹಾಳು ಸಿನೇಮಾಗಳು ಬೇರೆ ಇನ್ನೇನು. ನನ್ನ ಮಾನಾ ಕಾಪಾಡಿದೆ. ಸಾಕು. ಏನಾದರೂ

ಆಗಲಿ, ಮುಂದೆ ನುಗ್ಗೋಣ. ಇರಲಿ, ಕುಟುಂಬರಾಯನೆಲ್ಲಿ?" ಎಂದು ಕೇಳಿ, ಕಾಂತರಾಯನ ಉತ್ತರವನ್ನಾಶಿಸದೆ ಆ ಉತ್ಸಾಹದಲ್ಲಿ ಮೈಮರೆತು ಸ್ಟೇಜಿನ ಕಡೆ ಹೊರಟ.

ಅಲ್ಲಿಗೆ ಹೋಗುವಷ್ಟರಲ್ಲೇ ಕಾಂತರಾಯನು ಒಳಗೆ ಬಂದುಬಿಟ್ಟು ವೇಳೆ ಆಯಿತೆಂದು ಬಡ ಬಡಿಸ ಹತ್ತಿದ. ಸರಿಯಾದ ವೇಳೆಗೆ ನಾಟಕ ಆರಂಭಿಸಲೇ ಬೇಕು. ಯಾವುದೂ ತಡವಾಗಬಾರದೆಂದು ಅವನ ಅಪ್ಪಣೆ. ಪೂಜೆಯೆಲ್ಲವೂ ಮುಗಿದ ನಂತರ ನಾಟಕವು ಆರಂಭ ವಾಯಿತು.

ಮೊದಲನೆಯ ಪ್ರವೇಶದಲ್ಲಿ ಪ್ರಭಾಕರನು ಹೋಗ ಬೇಕಾಗಿತ್ತು. ಅದಕ್ಕೆ ಮೊದಲು, ಕಾಂತನು ಮುದುಕರಾದ ಮಿತ್ರರಿಬ್ಬರನ್ನೂ ರಿಜರ್ವ ಕುರ್ಚಿಯ ಮೇಲೆ ಕೂತು ನಾಟಕವೆಲ್ಲವನ್ನೂ ಆದ್ಯಂತವಾಗಿ ನೋಡಿ ಸಲಹೆ ಸೂಚನೆಗಳನ್ನು ಹೇಳಬೇಕೆಂದು ಸ್ಟೇಜಿನಿಂದ ಹೊರಗೆ ಹೋಗ ಬೇಕೆಂದು ಸೂಚಿಸಿದ. ಸರಿಯೆಂದು ಹೊರಗೆ ಬಂದು ತಮಗಾಗಿ ಕಾದಿಟ್ಟ ಆಸನಗಳ ಮೇಲೆ ಕೂತರು. ಸತ್ಯನಾರಾಯಣ ರಾಯನೊಮ್ಮೆ ಅನಸೂಯೆ ಕುಸುಮರು ಕುಳಿತಿದ್ದ ಕಡೆ ನೋಡಿ ಮುಸಿ ಮುಸಿ ನಕ್ಕು ಮೀಸೆ ಸವರಿಸಿಕೊಂಡು ಕುಳಿತ. ಕುಟುಂಬರಾಯನಿಗೆ ಇದಾವುದೂ ತಿಳಿದಿರಲಿಲ್ಲ.

ಪ್ರ ಭಾ ಕ ರ ನು ಒಳಗಿನಿಂದಲೇ ಭಾವಕವಿತೆಯೊಂದನ್ನು ಹಾಡುತ್ತ ರಂಗಭೂಮಿಯ ಮೇಲೆ ಬಂದ. ಅವನ ಮಧುರ ಸ್ವರ, ಆರ್ಕೆಸ್ಟ್ರಾದ ಜತೆಯಲ್ಲಿ ಜೋಡಿಸಿದ ಆ ಹಾಡಿನ ಮಾಧುರ್ಯ, ಎತ್ತಿ ಶುಶ್ರಾವ್ಯವಾಗಿ ಹಾಡುತ್ತಲಿದ್ದ ಪ್ರಭಾಕರನ ಭಂಗಿ, ಎಲ್ಲವೂ ಜನರಿಗೆ ಮೆಚ್ಚುಗೆಯಾಯಿತು. ಕರತಾಡನದಿಂದ ಜನರು ತಮ್ಮ ಸಂತೋಷ ವನ್ನು ವ್ಯಕ್ತಗೊಳಿಸಿದರು. ಪ್ರಭಾಕರನನ್ನು ಕುಸುಮಳು ದಿಟ್ಟಿಸಿ ನೋಡುತ್ತಿದ್ದಾಳೆ. ಬಣ್ಣ ಹಾಕಿಕೊಂಡು ಕುಡಿಮೀಸೆಯನ್ನಿರಿಸಿಕೊಂಡ ಇವನ ಮುಖ ಲಕ್ಷಣವೇ ಬೇರೆಯಾಗಿತ್ತು. ಇವನ ಸಂಗೀತ ಬೇರೆ. ಇವನ ಗುರುತು ಪೂರ್ತಿ ಆಗದೇ ಇದ್ದರೂ ಕುಸುಮಳ ಮನಸ್ಸು ಮಾತ್ರ ಕಳವಳಗೊಂಡಿತು. ಇವನಾರೋ ತನಗೆ ಪರಿಚಿತರಾದವರಲ್ಲೊಬ್ಬನಾಗಿರ

ಬಹುದೆಂದು ಮನಸ್ಸು ಹೇಳುತಿತ್ತು. ಅವಳ ದೃಷ್ಟಿ ಎಲ್ಲವೂ ಪ್ರಭಾಕರನ ಕಡೆ ಇತ್ತು.

ನಾಟಕದ ಮೊದಲಿರಡು ಅಂಕಗಳು ಸಾಗಿದರೂ ಪ್ರಭಾಕರನ ದೃಷ್ಟಿ ಕುಸುಮಳಿದ್ದ ಕಡೆ ಹೋಗಿರಲಿಲ್ಲ. ಮೊದಲಿನಿಂದಲೂ ಜನರು ಇವನ ಸಂಗೀತವನ್ನು ಕೇಳಬೇಕೆಂಬ ಉತ್ಸುಕತೆ ವ್ಯಕ್ತಗೊಳಿಸುತ್ತಿದ್ದರು. ವನ್ಸ್‌ಮೋರುಗಳ ಮೇಲೆ ವನ್ಸ್‌ಮೋರುಗಳ ಸುರಿಮಳೆ. ನಾಟಕದಲ್ಲೆಲಾ ತುಂಬಾ ಹಾಸ್ಯವಿತ್ತು. ಹಾಡುಗಳನ್ನು ಆನಂದದಿಂದ ಕೇಳ ತೊಡಗಿದರು. ಪ್ರಭಾಕರನಿಗೆ 'ವನ್ಸ್‌ಮೋರ್'ಂದಾಗ ಹಾಡುವುದು ರುಚಿಸುತ್ತಿರಲಿಲ್ಲ. ಹಾಗೆ ಮಾಡುವುದರಿಂದ ರಸಭಂಗವಾಗುವುದೆಂದೂ, ನಾಟ್ಯಕಲೆಗೆ ಕುಂದುಂಟಾಗುವುದೆಂದೂ ಅವನ ವಾದ. ಆದರೆ ನಾಲ್ಕು ಮಂದಿಗೆ ಬೇಕಾದುದು ನಾಟಕಕಾರನು ಒದಗಿಸಬೇಕೆಂದು, ನೋಡುವವರಿಗೆ ಆನಂದವನ್ನುಂಟುಮಾಡುವುದೇ ಕಲೆಯೆಂದು ಕಾಂತರಾಯನ ಅಭಿಮತ. ಕೃತ್ರಿಮ ನಟನೆಯಿಂದ ನಟಿಸಿದರೆ ಏನು ಪ್ರಯೋಜನ? ಮಾತುಕತೆಯಲ್ಲಿ ಸಹಜವಾದ ಭಾವನೆಗಳನ್ನು ಸೇರಿಸಿ ನಟಿಸಿದರೆ ಪ್ರೇಕ್ಷಕರಿಗೆ ಆನಂದವಾಗುವುದು. ಸಮಯಕ್ಕನುಸರಿಸಿ, ಸನ್ನಿವೇಶಕ್ಕನುಗುಣವಾಗಿ ಪಾತ್ರಾಭಿನಯದಲ್ಲಿ ಸಹಜತೆಯನ್ನು ಬೆರೆಯಿಸಿ ಜೀವನದ ಸಾಮಾನ್ಯ ಪಾತ್ರಗಳಂತೆ ಸರಳ ರೀತಿಯಲ್ಲಿ ಮಾತುಗಳನ್ನು ಆಡಿ ತೋರಿಸುವುದೇ ನಿಜವಾದ ನಟನ ಕರ್ತವ್ಯ. ಈ ರೀತಿಯ ಮಾರ್ಪಾಡು ನಾಟಕದಲ್ಲಿ ಕಂಡುಬಂದುದರಿಂದ, ಬಂದವರೆಲ್ಲರು ಕುತೂಹಲದಿಂದ ನೋಡಿ ಆನಂದಿಸುತ್ತಿದ್ದರು. ತನ್ನ ಮನಸ್ಸಿಗೆ ಬೇಡವಾಗಿದ್ದರೂ ಪ್ರಭಾಕರನು ಕಾಂತರಾಯನ ಮಾತಿನ ಮೇರೆಗೆ ಹಾಡಿದ ಹಾಡನ್ನು ಪುನಃ ಅಂದು ತೋರಿಸಲೇ ಬೇಕಾಗಿತ್ತು.

ಮೂರನೇ ಅಂಕ ನಡೆದಿದೆ. ಪ್ರಭಾಕರನು ಒಮ್ಮೇಲೆ ಕುಸುಮಳು ಕುಳಿತಿದ್ದ ಕಡೆ ಅಕಾರಣವಾಗಿ ನೋಡಿದ. ಅವಳ ಪರಿಚಯ ಚೆನ್ನಾಗಿ ಅವನ ನೆನಪಿನಲ್ಲಿ ಉಳಿದಿತ್ತು. ಇವಳಿಲ್ಲಿಗೆ ಬರಲು ಹೇಗೆ ಸಾಧ್ಯವೆಂಬ ಯೋಚನೆ ಅವನನ್ನು ಗೊಂದಲಕ್ಕೀಡು ಮಾಡಿತು. ಪ್ರಭಾಕರನಲ್ಲಿ ಉಂಟಾದ ಈ ಬದಲಾವಣೆಯನ್ನು ಕಾಂತರಾಯನು ಗಮನಿಸಿದ.

ಹೀಗೆ ಗೊಂದಲದಲ್ಲಿ ಬೀಳಲು ಕಾರಣವೇನೆಂದು ತಿಳಿಯದೇ ಯೋಚನೆಯಲ್ಲಿ ಬಿದ್ದ. ಸೈಡ್ ವಿಂಗ್ಸಿನಿಂದ ಸನ್ನೆ ಮಾಡಿ ಪ್ರಭಾಕರನನ್ನು ಎಚ್ಚರಿಸಿದ. ಆದರೆ ಅವನ ಮನಸ್ಸು ಹಿಡಿತದಲ್ಲಿರಲಿಲ್ಲ. ಮಾಡುವುದೇನೆಂಬುವುದು ತಿಳಿಯದೇ ಸುಮ್ಮನಾದ.

ರಂಗಭೂಮಿಯ ಮೇಲೆ ನಾಯಕನ ಪಾತ್ರ ವಹಿಸಿದವನು ಪ್ರಭಾಕರನೆಂದು ಕುಸುಮಳು ನಿಶ್ಚಯಿಸಿದಳು. ಕೂತ ಸ್ಥಳದಿಂದೆದ್ದು ಹೊರಗೆ ಬಂದಳು. ಬಹಳ ಅವಸರ ಮೂಲಕ ಗೇಟಿನಲ್ಲಿ ಔಟು ಪ್ಯಾಸನ್ನು ಕೂಡ ತೆಗೆದುಕೊಳ್ಳುವಷ್ಟು ಸಮಾಧಾನವಿರಲಿಲ್ಲ. ಆತುರದಿಂದ ಹೊರಗೆ ಬಂದು ಬಿಟ್ಟಳು. ಸ್ಟೇಜಿನಲ್ಲಿ ಹೋಗುವ ಹಾದಿ ತಿಳಿಯದಲೇ ಹತಾಶಳಾಗಿ ಹುಡುಕ ಹತ್ತಿದಳು.

ಅಲ್ಲಿ ಸ್ಟೇಜಿನ ಮೇಲೆ ಸಮಯ ದೊರೆತಾಗ ಪ್ರಭಾಕರನು ವಿಂಗಿನ ಹತ್ತಿರ ಬಂದು, ಕಾಂತನಿಗೆ, "ಹೊರಗೆ ಕುಸುಮಳು ಬಂದು ನಿಂತಂತಿದೆ. ಹೋಗಿ ಕರೆದುಕೊಂಡು ಬಾ" ಎಂಬ ಮಾತುಗಳನ್ನು ಹೇಳಿ ಪುನಹ ತನ್ನ ಪಾತ್ರಾಭಿನಯವನ್ನಾರಂಭಿಸಿದ. ಇವನು ಹೀಗೆ ವಿಂಗ್ಸದ ಹತ್ತಿರ ಬಂದು ಪಿಸು ಮಾತನಾಡಿದುದು ಸನ್ನಿವೇಶದಲ್ಲಿಯ ಒಂದಂಶವೆಂದು ಪ್ರೇಕ್ಷಕರು ತಿಳಿವಂತಹ ಸಂದರ್ಭವಿದ್ದುದರಿಂದ ಇವರ ಗುಟ್ಟು ಹೊರಬೀಳಲಿಲ್ಲ. ಇಂತಹ ಯುಕ್ತಿಗಳನ್ನು ಕಲ್ಪಿಸಿಕೊಂಡು ಸಂಕಟದಿಂದ ಪಾರಾಗುವುದು ನುರಿತ ನಟರ ದಿನದ ಕಾರ್ಯವಾದುದರಿಂದ ಪ್ರಭಾಕರನಿಗೇನೂ ಕಷ್ಟವೆನಿಸಲಿಲ್ಲ.

ಇಂಗಿತವನ್ನು ತಿಳಿದು ಕಾಂತನು ಸ್ಟೇಜಿನ ಹೊರಗೆ ಬಂದವನೇ ಕುಸುಮಳನ್ನು ಗುರುತಿಸಿ, ನಗುವಿನಿಂದ ಬರಮಾಡಿಕೊಂಡನು. ನಿರಾಶಳಾದ ಕುಸುಮಳ ಮುಖ ಬಾಡಿದ್ದರೂ, ಕಾಂತರಾಯನನ್ನು ಕಂಡೊಡನೆ ಆವಳಿಗೆ ಹೋದ ಜೀವ ಬಂದಂತಾಯಿತು. ಹೆಚ್ಚೇನು ಮಾತನಾಡಲಾಗಲಿಲ್ಲ. "ನೀವೂ ಇಲ್ಲಿ?" ಎಂಬ ಸಂಕೇತದಿಂದ ಮಾತನಾಡಿಸುವಷ್ಟರಲ್ಲಿ ಇಬ್ಬರೂ ಸ್ಟೇಜಿನಲ್ಲಿ ಬಂದಿದ್ದರು. ಅಲ್ಲಿಗೆ ಪ್ರಭಾಕರನ ಪ್ರವೇಶವೂ ಮುಗಿದಿದ್ದುದರಿಂದ ಪ್ರಭಾಕರನೂ ಬಂದು ಇವರನ್ನು ಸೇರಿಕೊಂಡ.

''ಅಲ್ಲ, ಕಾಂತರಾಯರೆ, ನೀವಿಬ್ಬರೂ ಇಲ್ಲಿರುವುದು....?" ಎಂದು ಏನೋ ಕೇಳುವುದರಲ್ಲಿದ್ದಳು ಕುಸುಮ.

''ಅದಿರಲಿ, ಕುಸುಮಾದೇವಿಯವರೆ, ಹಿಂದಿನಿಂದ ಎಲ್ಲವನ್ನೂ ವಿಚಾರಿಸುವ. ನಾವು ಬರೆದ ಕಾಗದಗಳೆರಡೂ ನಿಮಗೆ ಸೇರಿದಂತಿಲ್ಲ ಪಾಪ—ಪ್ರಭಾಕರ್; ಇನ್ನು ೧೫ ನಿಮಿಷಗಳ ವಿರಾಮವಿದೆ. ನೀನು ಡ್ರೆಸ್ ಬದಲಾಯಿಸಬೇಕು; ಮುಂದಿನ ಪ್ರವೇಶ ಆರಂಭಿಸಬೇಕು. ನೀನು, ಕುಸುಮಾ ಆ ಸ್ಪೆಶ್ಯಲ್ ಡ್ರೆಸ್ಸಿಂಗ್ ರೂಮಿನಲ್ಲಿದ್ದು ಮಾತನಾಡುತ್ತ ಅಲಂಕಾರ ಮಾಡಿಕೋ. ತಡಮಾಡಬ್ಯಾಡ ಮಹಾರಾಯ. ಇನ್ನೇನು, ನಾನು ಬರುತ್ತೇನೆ" ಎಂದು ಕುಸುಮಳ ಅನುಮತಿಯನ್ನು ಪಡೆದು ಕಾಂತರಾಯನು ಆ ಕಡೆ ಹೊರಟು ಹೋದ.

ಸ್ಪೆಷಲ್‌ರೂಂನಲ್ಲಿ ಕಾಲಿಡುತ್ತ ಪ್ರಭಾಕರನು ಕುಸುಮಳ ಕೋಮಲವಾದ ಕೈಯನ್ನು ಹಿಡಿದು "ನಮಗೇಕೆ ನೀನು ಕಾಗದ ಬರೆಯಲಿಲ್ಲ?" ಎಂದು ಕೇಳಿದ. ಹಿಡಿದ ಕೈಗಳನ್ನು ಮತ್ತೆ ಬಿಡುತ್ತ "ಇದೇನು ಹೀಗೆ ಮಾಡಿದೆ''! ಎಂದು ಆಶ್ಚರ್ಯದಿಂದ ಹೇಳಿದ ಮಾತುಗಳ ಅರ್ಥವಾಗದೆ, ಕುಸುಮಳು "ಏನು ಮಾಡಿದಿರಿ?'' ಎಂದು ಕೇಳಿದಳು.

"ಏನೂ ಇಲ್ಲ" ಎಂದು ಸುಮ್ಮನೇ ಕುಳಿತು ಬಿಟ್ಟ. ಪ್ರಭಾಕರನು ಎಷ್ಟು ಸಲುಗೆ ಇದ್ದರೂ ಕುಸುಮಳ ಕೈಗಳನ್ನು ಹಿಡಿದು ಒಳಗೆ ಕರೆದು ಕೊಂಡು ಹೋದುದು ಅಸಭ್ಯತನವೆಂದೆನಿಸಿತು. ಆದರೆ ಬಹಿರಂಗವಾಗಿ ಅದನ್ನು ವ್ಯಕ್ತಗೊಳಿಸಲು ಮನಸ್ಸಿರಲಿಲ್ಲ.

ಇದೆಲ್ಲವನ್ನು ನೋಡುತ್ತಲಿದ್ದ ಕುಸುಮಳ ಮನಸ್ಸಿನಲ್ಲಿ ಉಂಟಾಗುತ್ತಿದ್ದ ವೇದನೆಯನ್ನು ಹೊರಗೆ ಹೇಳುವ ಧೈರ್ಯವಾಗಲಿಲ್ಲ. ಆದರೆ ಸುಮ್ಮನೆ ಕುಳಿತು ಬಿಡುವಷ್ಟು ಗಾಬರಿ ಸ್ವಭಾವದವಳೂ ಅಲ್ಲ. ತನ್ನ ಪ್ರೀತಿಯ ಮೂರ್ತಿಯನ್ನು ಕಾಣುವ ಸಮಯ ಬಂದೊದಗಿದುದು ಆನಂದದ ವಿಷಯವಾಗಿತ್ತು. ಸಂತೋಷದಿಂದ ಅವಳ ಕಪೋಲಗಳು ತಾವಾಗಿಯೇ ಉಬ್ಬಿದವು. ಕಣ್ಣಲ್ಲಿಯ ಆನಂದದ ಅಶ್ರುಗಳಿಂದ ದೃಷ್ಟಿಯು ಮಂದವಾಯಿತು. ಕಣ್ಣೊರಸಿಕೊಳ್ಳುತ್ತ "ನನ್ನ ಕಥೆಯನ್ನು ವಿವರವಾಗಿ ಸಮಯ ದೊರೆತಾಗ ಹೇಳುತ್ತೇನೆ. ಈಗ ಬೇಡ.

ಇರಲಿ, ನಿಮ್ಮ ಪರಿಸ್ಥಿತಿ ಹೇಗಿದೆ? ಮೊದಲು ಹೇಳಿ. ಎಲ್ಲವೂ ಕುಶಲ ವಷ್ಟೆ? ಅಬ್ಬ ಎಂತಹ ಸುದಿನವಿದು........!" ಎಂದು ಮುಂದುವರಿಸುವ ಅವಳ ಮಾತನ್ನು ತಡೆದು –

"ನಾನು ವ್ಯವಹಾರದಲ್ಲಿ ಬಿದ್ದು ಸ್ವಲ್ಪ ಜ್ಞಾನಾರ್ಜನೆಯನ್ನೂ ಮಾಡಿಕೊಂಡಿದ್ದೇನೆ. ಹೊಸ ಅನುಭವದಿಂದ ನನಗೆ ಅರಿವೂ ಉಂಟಾ ಗಿದೆ" ಎಂದು ಪ್ರಭಾಕರನು ಬಡಬಡಿಸಿದ.

"ಅಂತಹದೇನಾಯಿತು?''

"ಲೋಕದಲ್ಲಿ ನಾನು ಪ್ರೀತಿಸಿದ ಹೆಣ್ಣು......"

ಸ್ವಲ್ಪ ಮೌನ.

ಪ್ರಭಾಕರನು ತಪ್ಪು ಮಾಡಿದವನಂತೆ ಕುಸುಮಳ ಕಡೆಗೆ ನೋಡುತ್ತ ನಿಂತ. ಅವಳು ಚೇತರಿಸಿಕೊಂಡು –

"ಇಲ್ಲಿ ನೋಡ್ರಿ, ಏನು ಈ ಹುಚ್ಚು ಮಾತು?'' ಎಂದು ಪ್ರಭಾ ಕರನನ್ನು ಒಂದೇ ಸಮನೆ ನೆಟ್ಟ ದೃಷ್ಟಿಯಿಂದ ನೋಡಿದಳು. ಆ ಅರ ಳಿದ ಕಣ್ಣುಗಳಲ್ಲಿ, ವಿಕಸಿತ ಮುಖದಲ್ಲಿ ಕಂಡು ಬಂದ ಸೊಬಗು ಪ್ರಭಾ ಕರನನ್ನು ಹುಚ್ಚೆಬ್ಬಿಸಿತು.

"ಏತಕ್ಕೆ? ಏನಿದೆ?" ಎಂದು ಪ್ರಭಾಕರನೂ ಅವಳ ಕಡೆ ನೋಡಿದ. ಅರಳಿದ ಈ ಎರಡೂ ಕಣ್ಣುಗಳ ದೃಷ್ಟಿಯು ಒಂದಾಯಿತು. ಎರಡು ಹೃದಯಗಳೊಂದಾದವು. ದೂರಿದ್ದ ಕೈಗಳು ಮತ್ತೆ ಸೇರಿಕೊಂಡವು. ಪ್ರಭಾಕರನು ಮೃದುವಾದ ಕುಸುಮಳ ಕೈಗಳನ್ನು ಮೆಲ್ಲನೆ ಹಿಸುಕಿದನು. ಅವನಿಗೆ ಹೊಸ ಬಗೆಯ ಆನಂದದ ಅರಿವಾಯಿತು. ಮತ್ತವಳ ಕಡೆ ನೋಡುತ್ತ ಸುಮ್ಮನೇ ನಿಂತು ಬಿಟ್ಟ. ಕುಸುಮಳೂ ಆನಂದದಲ್ಲಿ ಮೈ ಮರೆತಿದ್ದಳು.

''ಅಲ್ಲಾ, ನಿಮ್ಮೆದುರು ನಿಂತಿರುವವಳು ನಾನು ಕುಸುಮಾ, ತಿಳಿ ಯಿತೆ?" ಎಂದು ಸೂಚಿಸಿದ ಮಾತಿಗೆ ಸರಿಯಾಗಿ ಸ್ಟೇಜಿನಿಂದ ಕಾಂತ ರಾಯನ ಎಚ್ಚರಿಕೆಯ ಮಾತು ಕೇಳಿ ಬಂದವು.

ಲಗುಬಗೆಯಿಂದ ಡ್ರೆಸ್ ಬದಲಾಯಿಸಿದ. ಮುಂದೆ ನಾಟಕವು ಬಹು ರಮ್ಯವಾಗಿ ಕೊನೆಗೊಂಡಿತು.

## ೧೩

ತಮ್ಮ ಹೊಸ ರೀತಿಯ ನಾಟಕವು ಕ್ರಮೇಣ ಜನಪ್ರಿಯವಾಗಿ, ಯಶಸ್ವಿಯಾಗಬಹುದೆಂದು ಕಾಂತರಾಯನು ನೆನೆದಿದ್ದನು. ಮೊದಲ ನೆಯ ಪ್ರಯೋಗಕ್ಕೇನೆ ಇಷ್ಟು ಬೆಂಬಲ, ಪ್ರೋತ್ಸಾಹ ಸಿಗುವುದೆಂದು ನೆನೆದಿರಲಿಲ್ಲ.

"ಕಾಂತ್, ಅಂತೂ ನಮ್ಮ ಯೋಜನೆ ಒಳ್ಳೇ ರೀತಿಯಲ್ಲಿ ಸಾಧಿಸಿದ ಹಾಗಾಯಿತು." ಎಂದು ಕುಟುಂಬರಾಯರು ನಾಟಕ ಮುಗಿದ ಮೇಲೆ ಸ್ಟೇಜಿನ ಮೇಲೆ ಬಂದು ಬೆನ್ನು ಚಪ್ಪರಿಸುತ್ತ ಹೇಳಿದರು.

"ಇದರಲ್ಲೇನಿದೆ. ಈಗಲಾದರೂ ನಮ್ಮ ಅಭಿಪ್ರಾಯಗಳಿಗೆ ನಿಮ್ಮ ಸಮ್ಮತಿ ತಾನೆ? ಇಷ್ಟರೊಳಗೇನಾಯಿತು? ನಾಳೆ ಸಾವಿರಾರು ರೂಪಾಯಿಗಳನ್ನು ಇದರಲ್ಲಿ ಸುರುವಿ ಸನ್ನಿವೇಶಕ್ಕನುಗುಣವಾದ ಸೆಟ್ಟಿಂಗ್ಸು, ಎಲೆಕ್ಟ್ರಿಕ್ ದೀಪದ ವ್ಯವಸ್ಥೆ, ಧ್ವನಿವಾಹಕ ಯಂತ್ರ ಎಲ್ಲಾ ತಯಾರು ಮಾಡಿ ನೋಡಬೇಕು. ಹೆಣ್ಣು ಮಕ್ಕಳೇ ಹೆಣ್ಣು ಪಾತ್ರ ಗಳನ್ನು ಧರಿಸಿದರೆ ನಾಟಕಕ್ಕೆ ವಾಸ್ತವ್ಯತೆಯ ಸತ್ಯ ಜೀವನದ ಕಳೆ ಬಂದಿತೆಂದರೆ ಆಗ ನೋಡುವಿರಂತೆ ನಮ್ಮ ಕಂಪನಿಯ ಉನ್ನತಿಯನ್ನು. ಈಗ ಮಾತ್ರ ನೀವು ಸುಮ್ಮನಿರಿ" ಎಂದು ಹೇಳಿ ಕಾಂತನು ಸಂತೋಷದ ಸಾಮ್ರಾಜ್ಯದಲ್ಲಿ ಕುಟುಂಬರಾಯರನ್ನು ಮುಳುಗಿಸಿದ.

ಹೀಗೆ ಮಾವ ಅಳಿಯಂದಿರು ಇಲ್ಲಿ ಹರಟೆ ಕೊಚ್ಚುತ್ತಿದ್ದರೆ, ಸ್ಪೆಷಲ್ ರೂಮಿನಲ್ಲಿ ಆನಂದ ಸಾಗರದಲ್ಲಿದ್ದ ಕುಸುಮ ಪ್ರಭಾಕರರಿಗೆ ಹೊರ ಪ್ರಪಂಚದ ಅರಿವೇ ಇರಲಿಲ್ಲ. ಇವರ ಈ ಆಕಸ್ಮಿಕ ಮಿಲನದಲ್ಲಿ ನವಚೈತನ್ಯ ಉಂಟಾಗಿದ್ದಿತು; ಹೊಸ ಹುರುಪು ತಲೆದೋರಿತ್ತು. ನವದಂಪತಿಗಳಂತೆ ಮಾತನಾಡುವುದರಲ್ಲಿ ನಾಚುತ್ತಿದ್ದರು. ನೂತನ ಸಮಾಗಮದ ಸುಖವಿತ್ತು, ಅವರ ಮಾತಿನ ರಸಿಕತೆಯಲ್ಲಿ ಮುಸಿಮುಸಿ, ಪಿಸು ಮಾತು, ಕೈಕೈಗಳ ತಾಕಲಾಟ, ಇವುಗಳೇ ಅವರ ಸಂಭಾಷಣೆಯ ರೂಪರೇಷೆಯಾಗಿತ್ತು.

ಮತ್ತೊಂದು ಕಡೆ ಕುಸುಮಳಿಗಾಗಿ ಮೇಲೆ ಕೆಳಗೆ, ಹೊರಗೆ, ಒಳಗೆ

ಹುಡುಕಿ, ಹುಡುಕಿ, ರಾಯನು ಜೇಸತ್ತು ಅನಸೂಯೆಯ ಹತ್ತಿರ ಬಂದು ಕುಸುಮಳ ಬಗ್ಗೆ ವಿಚಾರಿಸಿದನು. "ನನಗೊಂದೂ ಅರ್ಥವಾಗಿಲ್ಲ. ಆಟದ ನಡುವೆ ಎದ್ದು ಹೋದವಳು ತಿರುಗಿ ಬರಲೇ ಇಲ್ಲ. ಈಗ ಬಂದಾಳು ಆಗ ಬಂದಾಳೆಂದು ಕಾದುಕಾದು ಸಾಕಾಯ್ತು" ಎಂದು ಹೇಳುತ್ತಿರುವಾಗ ಸ್ಟೇಜಿನಿಂದ ಪ್ರಭಾಕರ್, ಕಾಂತರಾಯ, ಕುಸುಮಳು ಹೊರಗೆ ಬರುವು ದನ್ನು ಕಂಡು ಬೆರಗಾದಳು. ಅವರು ತಮ್ಮಕಡೆ ಬರುತ್ತಿರುವುದನ್ನು ನೋಡಿ ಅರ್ಥವಾಗದ ನೋಟವೊಂದಿಗೆ ದುರದುರನೆ ನೋಡಹತ್ತಿದನು ಸತ್ಯನಾರಾಯಣರಾಯ. ಅವಸರದಿಂದ ಕುಸುಮಳು ಇವರು ನಿಂತಿದ್ದ ಕಡೆಬಂದು "ನಾರಾಯಣರಾಯರೆ, ಇವರಿಬ್ಬರೂ ನನ್ನ ಹಳೆಯ ಸ್ನೇಹಿ ತರು. ಇವತ್ತು ಇವರೊಂದಿಗೆ ಅವಶ್ಯದ ಕೆಲವು ಮಾತುಗಳನ್ನಾಡ ಬೇಕಾಗಿದೆ. ಇವರ ಹಿಂದೆ ಹೋಗುತ್ತೇನೆ ಕ್ಷಮಿಸಬೇಕು" ಎಂದು ಹೇಳಿದಳು.

ಸತ್ಯನಾರಾಯಣರಾಯನು ಅವಾಕ್ಕಾಗಿ ನೋಡುತ್ತ ಸುಮ್ಮನೇ ನಿಂತುಬಿಟ್ಟ. ಇವನ ಮೌನವೇ ಅಂಗೀಕಾರವೆಂದು ತಿಳಿದು ಕುಸುಮಳು ಅವರೊಂದಿಗೆ ಲಾಡ್ಜಿನ ಕಡೆ ಹೊರಟುಹೋದಳು. ಇತ್ತ ಭಾರವಾದ ಮನಸ್ಸಿನಿಂದ ಅನಸೂಯಳನ್ನು ಮನೆಯ ವರೆಗೆ ಕಳುಹಿಸಿ ರಾಯನು ತಾನೂ ಮನೆ ಸೇರಿದರು.

ಮೂರೂ ಮಂದಿ ಸೇರಿ ಲಾಡ್ಜಿಗೆ ಹೋಗದೆ, ಕಾಂತನ ಸೋದರ ಮಾವನಾದ ಕುಟುಂಬರಾಯರ ಮನೆಗೆ ಹೋದರು. ಕುದುರೆಗಾಡಿ ಯಲ್ಲಿ ಹೋಗುವಾಗ ಕಾಂತರಾಯನು 'ಆ ಮುದುಕನು ಇಷ್ಟುದಿನ ನಮ್ಮೊಡನೆ ಮಾತನಾಡುವಾಗ ನಿನ್ನ ವಿಷಯ ನಮಗೇಕೆ ತಿಳಿಸಲಿಲ್ಲ?' ಎಂದು ಕೇಳಿದ.

"ಪಾಪ! ನೀವಿಬ್ಬರೂ ನನ್ನ ಹಿಂದಿನ ಸ್ನೇಹಿತರೆಂದು ಆತನಿಗೆ ಹೇಗೆ ತಿಳಿದಿರಬೇಕು? ಮುದಿ ಹುಚ್ಚಿನ ಗುಂಗಿನಲ್ಲಿ ಬೇರೆ ಯಾವುದೂ ಬೇಕಾ ಗಿಲ್ಲ ಅವನಿಗೆ. ನಾನವನ ಹೆಂಡತಿಯಾಗಬೇಕಂತೆ!" ಎಂದು ಹೇಳಿ ಸ್ವಲ್ಪ ನಕ್ಕುಬಿಟ್ಟಳು.

"ಆತನ ಪರಿಚಯ ನಿನಗೆ ಹೇಗಾಯಿತು?" ಎಂದು ಕಾಂತರಾ ಯನು ಕೇಳಿದ.

“ಅವರ ಹುಡುಗರಿಗೆ ಪಾಠ ಹೇಳುತ್ತಲಿದ್ದೇನೆ”

“ಇದೇನು?” ಎಂದು ಆಶ್ಚರ್ಯದಿಂದ ಕೇಳಿದ ಪ್ರಭಾಕರನು.

“ಹಣದ ಕೊರತೆಯಿಂದಲ್ಲ, ಸುಮ್ಮನೇ ಹೊತ್ತು ಕಳೆಯುವ ಕಾರಣದಿಂದ”

“ಆದರೆ ನೀನೀ ಊರಿಗೆ ಬಂದುದಾದರೂ ಎಂದು?” ಎಂದು ಕಾಂತರಾಯನು ಕೇಳಿದ ಪ್ರಶ್ನೆಗೆ ಉತ್ತರವಾಗಿ “ಇದಿನೈದಿಪ್ಪತ್ತು ದಿನಗಳಾಗಿರಬಹುದು. ಚಿಕ್ಕಪ್ಪನ ಮನೆ ಬೇಸರವಾಯಿತು. ಅಲ್ಲಿಯ ಕತೆ ಆ ಮೇಲೆ ವಿವರವಾಗಿ ಹೇಳುತ್ತೇನೆ. ಆದುದರಿಂದ ನಮ್ಮ ದೊಡ್ಡಮ್ಮನ ಮನೆಗೆ ಬಂದು ಬಿಟ್ಟೆ.”

“ರಾಯರ ಜೊತೆಯಲ್ಲಿದ್ದವರಾರು?”

“ನಿಮಗೆ ಗೊತ್ತಿಲ್ವೇನು? ನಾಟಕಕ್ಕೂ ಬಂದಿದ್ದಳು. ಪರಿಚಯ ಮಾಡಿಕೊಡುವುದನ್ನೇ ಮರೆತು ಬಿಟ್ಟೆ ಅವಸರದಲ್ಲಿ. ಆಕೆಯೇ ನನ್ನ ದೊಡ್ಡಮ್ಮ.”

“ಅವಳ ಅನುಮತಿಯನ್ನು ನಾವು ಕೇಳಲೇ ಇಲ್ಲವಲ್ಲ. ನಿನ್ನನ್ನು ನಮ್ಮೊಡನೆ ಕರೆದುಕೊಂಡು ಬರುವಾಗ?” ಎಂದನು ಪ್ರಭಾಕರನು.

“ಏತಕ್ಕೆ ಕೇಳಬೇಕು?” ಎಂದಳು ಕುಸುಮಳು.

“ಮನೆಯ ಯಜಮಾನಿಯನ್ನು ಕೇಳದಿರುವುದು ತಪ್ಪಾಗುವುದಿಲ್ಲವೆ?”

“ಅಂತಹ ನಿಯಮಗಳ ಪಾಲನೆ ನಮ್ಮ ಮನೆಯಲ್ಲಿರಬೇಕಾಗಿಲ್ಲ. ನಾನೇನು ಮಾಡಿದರೂ ನಮ್ಮ ದೊಡ್ಡಮ್ಮನಿಗೆ ಒಪ್ಪಿಗೆಯೆ” ಎಂದು ಹೇಳಿ ಪ್ರಭಾಕರನನ್ನು ಸುಮ್ಮನಾಗಿಸಿದಳು ಕುಸುಮಳು.

ಮನೆಸೇರುವ ಹೊತ್ತಿಗೆ ರಾತ್ರಿ ಎರಡಾಯಿತು. ಮೂರು ಹೊಡೆಯುವ ವರೆಗೆ ಮೂವರೂ ಏನೇನೋ ಹರಟೆ ಹೊಡೆದರು. ನಾಲ್ಕರ ಸಮಯಕ್ಕೆ ಕಾಂತನು ಗೊರಕೆ ಹೊಡೆಯ ಹತ್ತಿದನು. ದಣಿದುದರಿಂದ ನಿದ್ದೆ ಬರುವಷ್ಟು ಬೇಸರವಾಗಿದ್ದರೂ, ತಲೆಯಲ್ಲಿ ಏನೇನೋ ಯೋಚನೆಗಳ ಗೊಂದಲದಲ್ಲಿ ಪ್ರಭಾಕರನಿಗೆ ನಿದ್ದೆ ಬರಲಿಲ್ಲ. ಸುಮ್ಮನೇ ಮುಚ್ಚಿದ ಕಣ್ಣು ತೆರೆದು ನೋಡಿದ. ಕುಸುಮಳು ಮಂಚದ ಮೇಲೆ ಮಲಗಿದ್ದ

ವಳು ಎದ್ದು, ವರಾಂಡದಲ್ಲಿ ಪ್ರಶಾಂತವಾಗಿ, ಹಿಟ್ಟು ಚೆಲ್ಲಿದಂತಿದ್ದ ಬೆಳು ದಿಂಗಳಿನ ಸವಿಯನ್ನು ತಂಗಾಳಿಯ ಸೊಗಸನ್ನು ಅನುಭವಿಸಲು ಹೋಗಿ ನಿಂತದ್ದನ್ನು ಕಂಡ. ತಾನೂ ಹಾಸಿಗೆಯಿಂದ ಎದ್ದವನೇ ಅವಳನ್ನು ಸಮೀಪಿಸಿದ.

ಹತ್ತಿರ ಬಂದ ಪ್ರಭಾಕರನನ್ನುದ್ದೇಶಿಸಿ "ಏಕೆ, ನಿಮಗೂ ನಿದ್ದೆ ಬರಲಿಲ್ಲವೇನು?" ಎಂದು ಕೇಳಿದಳು.

"ಇಲ್ಲ ಕುಸುಮಾ, ಹುಚ್ಚು ಹಿಡಿದಂತಾಗಿದೆ ನನ್ನ ಈಗಿನ ಅವಸ್ಥೆ."

"ಏತಕ್ಕೆ?" ಎಂದಳು ಸ್ವಲ್ಪ ನಗುತ್ತ.

"ನನಗೇಕೋ ಸಮಾಧಾನವಿಲ್ಲ. ಇನ್ನೊಂದು ಸಲ ಹುಚ್ಚು ತಲೆ ದೋರಿತೆಂದರೆ ಅಂದು ನಾಟಕ ಭವನದ ರೂಮಿನಲ್ಲಿ ನಿನ್ನ ಕೈಹಿಡಿದಂತೆ ಈಗ ಮುಂದೇನು ಮಾಡಿ ಬಿಡುವೆನೋ ಹೇಳಲಾರೆ. ನನ್ನಿಂದ ಆದಷ್ಟು ದೂರ ದೂರವೇ ಇದ್ದುಬಿಡು. ಅನರ್ಥವಾದೀತು."

"ನಾನು ದೂರ ದೂರವೇ ಇದ್ದರೆ, ನಿಮ್ಮ ಸಾಹಸವೇನೆಂಬುವು ದನ್ನು ತಿಳಿಯುವುದಾದರೂ ಹೇಗೆ?" ಎಂದು ಹಾಸ್ಯದ ರೀತಿಯಲ್ಲಿ ಕೇಳಿದಳು.

ಬೇರೆ ಮಾತಿಲ್ಲದೆ ಕುಸುಮಳನ್ನು ಹತ್ತಿರ ಬರಮಾಡಿಕೊಂಡನು. ಇಬ್ಬರ ದೇಹಗಳು ನಡುಗಿದವು. ಏನು ಮಾಡುವುದಕ್ಕೂ ಸಾಹಸ ಬರ ಲಿಲ್ಲ. ಸುಮ್ಮನೇ ಆಲಿಂಗನದಲ್ಲಿದ್ದ ಅವರು ಮಾತನಾಡದೇ ಇಬ್ಬರೂ ತಿಳಿಬೆಳುದಿಂಗಳಲ್ಲಿ ಬೀಸುವ ಮಂದಮಾರುತನ ತಣಿವಿನಲ್ಲಿ ಮೈಮರೆತು ನಿಂತು ಬಿಟ್ಟಿದ್ದರು. ದೂರದಲ್ಲಿ ಕೇಳಿ ಬರುವ ಗಿಳಿವಿಂಡುಗಳ ಕಿಲಕಿಲ ಧ್ವನಿ, ಮೆಲ್ಲಗೆ ಬೀಸುವ ಗಾಳಿಯಲ್ಲಿ ಸೂಸಿ ಬರುವ ಇನಿದಾದ ಸ್ವರ, ಇವರ ಮಿಲನಕ್ಕೆ ಇನ್ನಷ್ಟು ಪುರುಪನ್ನಿತ್ತಿತ್ತು. ತೋಟದಲ್ಲಿ ಅರಳಿದ ಮಲ್ಲಿಗೆಯ ಸುವಾಸನೆ ಈ ಇಬ್ಬರ ಸಮಾಗಮವನ್ನು ಸಂತೋಷದಿಂದ ಪ್ರೋತ್ಸಾಹಿಸುವಂತೆ ಕಂಡುಬಂತು. ಉಷಾದೇವಿಯು ಇವರ ಮಿಲನದ ಸೊಬಗನ್ನು ಕಾಣುವ ಹೆಬ್ಬಯಕೆಯಿಂದ ಬೇಗನೆ ಬರುವಳೇನೋ ಎಂಬಂತೆ ಪೂರ್ವ ದಿಸೆಯಲ್ಲಿ ಬೆಳಕಿನ ಛಾಯೆ ತಲೆದೋರುತಿತ್ತು.

ಕೋಳಿ ಕೂಗುವ ಕಲರವ ಹೆಚ್ಚಿತು. ಇದರಿಂದ ಇವರಿಬ್ಬರೂ ತಮ್ಮ ಆಲಿಂಗನದ ಭರದಲ್ಲಿ ಮೈಮರೆತವರು ಎಚ್ಚತ್ತರು.

ಅದೇ ಗುಂಗಿನಲ್ಲಿ ಪ್ರಭಾಕರನು "ಕುಸುಮಾ, ಚಿಕ್ಕಪ್ಪನವರ ಮನೆಯಲ್ಲಿ ತೊಂದರೆಯಾದರೆ ನನಗೆ ತಿಳಿಸಬೇಕೆಂದು ನಿನಗೆ ಹೇಳಿರಲಿಲ್ಲವೆ; ನನಗೇಕೆ ಬರೆಯಲಿಲ್ಲ?"

"ನಾನು ನಿಮಗೆರಡು ಸಲ ಕಾಗದ ಬರೆದೆ. ಕಾಗದ ಬರೆದು ಅಂಚೆ ಪೆಟ್ಟಿಗೆಯಲ್ಲಿ ಹಾಕಲು ಹೋದಾಗ ಆದ ಕತೆ ಹೇಳಿದರೆ ಅದೊಂದು ಇತಿಹಾಸವಾಗುವುದು. ಇರಲಿ, ನಾನು ಬರೆದ ಕಾಗದಗಳು ನಿಮಗೆ ಸೇರಲಿಲ್ಲವೆಂಬಂತೆ ತೋರುತ್ತದೆ?"

"ಅಹುದು. ನಾವಿಬ್ಬರೂ ಪರಸ್ಪರ ಬರೆದ ಕಾಗದಗಳು ಸೇರದೇ ಇದ್ದುದರಿಂದಲೇ ಹೀಗಾಯಿತು. ನಿನ್ನ ಪುರಾಣವೆಲ್ಲ ಬಿಚ್ಚಿ ಹೇಳುವೆನೆಂದೆಯಲ್ಲ? ಹೇಳುವುದಿಲ್ಲವೆ?"

"ಗಾಡಿಯಲ್ಲಿ ಬರುವಾಗ ಹೇಳಿದೆನಲ್ಲ. ಇನ್ನೇನು ಉಳಿದಿದೆ?"

"ಅಲ್ಲಿಗೇ ಮುಗೀತೇನು?"

"ಸ್ಥೂಲವಾಗಿ ವಿಚಾರಿಸಿದರೆ ಅಷ್ಟೇ"

"ಸೂಕ್ಷ್ಮವಾಗಿ ಎಲ್ಲವನ್ನೂ ಹೇಳಬಾರದೆ?"

"ಹೋಗಲಿ ಬಿಡ್ರಿ. ಆ ಗೊಂದಲ ಈಗೇತಕ್ಕೆ? ಅಲ್ಲಿ ನೋಡ್ರಿ. ಮುಳುಗುವ ಚಂದಿರನೆಷ್ಟು ಚೆಲುವಾಗಿದ್ದಾನೆ. ನಿರ್ಮಲವಾದ ಆಕಾಶದಲ್ಲಿ ತಾನೊಬ್ಬನೇ ಕಳೆಗುಂದಿ ಮಾಯವಾಗುತ್ತಿರುವನು. ತಾರೆಗಳು ಅವನಿಂದ ದೂರಿರಲು ಯತ್ನಿಸುತ್ತಿರುವವು. ಆದರೆ ಅವನವುಗಳನ್ನು ಸೇರಲು ಹಾತೊರೆಯುತ್ತಿರುವಂತೆ ಕಂಡು ಬರುತ್ತದಲ್ಲವೆ? ಈ ನನ್ನ ಅನುಭವ ಕನಸೆ ನೆನಸೆ? ನೀವೇ ಹೇಳಿ ನೋಡುವ?"

"ಹುಚ್ಚು ಹುಡುಗಿ...." ಎಂದವನೆ ಅವಳನ್ನು ಹತ್ತಿರ ಸೆಳೆದುಕೊಂಡು........"ಕುಸುಮಾ, ಇನ್ನು ಮೇಲೆ ನನ್ನಿಂದ ದೂರಿರುವುದಿಲ್ಲವೆಂದು ಪ್ರಮಾಣಮಾಡಿ ಹೇಳುವೆಯಾ?"

"ದೂರಸರಿದು ಹೋಗಬೇಕಾಗಿ ಬಂದರೆ........?"

"ಹಾಗಾಗಲಾರದು. ನಾನು ನಿನ್ನನ್ನು ಮದುವೆಯಾಗುತ್ತೇನೆ."

"ಈ ನಿಮ್ಮ ನಿರ್ಧಾರ ನನಗೆ ಹೇಗೆ ತಿಳಿಯಬೇಕು? ನೀವು ಮನಸ್ಸಿನಲ್ಲಿ ಮುಚ್ಚಿಗೆ ಮಾಡಿಕೊಂಡರೆ ಗೋದಿಯ ಬೆಲೆ ಯಾರು ಕೊಡಬೇಕು?"

"ಸಮಯ ಬಂದಾಗ ಹೇಳೋಣವೆಂದು ಸುಮ್ಮನಿದ್ದೆ. ನಿನ್ನಿಂದ ದೂರಿದ್ದು ವ್ಯಥೆಪಡುವುದು ನನಗೆ ಬೇಡಾಗಿದೆ. ವಿರಹ ಬಾಧೆಯಿಂದ ನವೆಯುವುದು ನನಗಾಗದ ಕೆಲಸ. ನನ್ನನ್ನು ಈ ರೀತಿ ಪ್ರೀತಿಸಿ, ನಿನ್ನ ಹೃದಯದಲ್ಲಿ ಉನ್ನತವಾದ ಸ್ಥಾನಕೊಡುವಷ್ಟು ಗುಣಗಳು ನನ್ನಲ್ಲಿವೆಯೆಂದು ನಾನು ಭಾವಿಸಿರಲಿಲ್ಲ. ನೀನು ನನ್ನವಳಾಗುವುದು ನನ್ನ ಭಾಗ್ಯ. ನೀನು ಮಾಡುತ್ತಿರುವ ಈ ಉಪಕಾರದಲ್ಲಿ ನಟನೆ ಇಲ್ಲವಷ್ಟೆ? ನನ್ನಲ್ಲಿ ಆಶೆಹುಟ್ಟಿಸಿ, ಆಕೆಗೆ ನೀರೆರೆದು ಅನಂತರ 'ನೀನಾರು ದೂರ ಸರಿ' ಎನ್ನುವುದಿಲ್ಲವಷ್ಟೆ? ಈಗ ನಡೆದುದೆಲ್ಲವೂ ನಿಜವೆಂದು ತಿಳಿಯಲೆ? ಕನಸಲ್ಲವಷ್ಟೆ? ಹೇಳು, ಬಿಚ್ಚಿ ಹೇಳು, ಕುಸುಮಾ"

"ಕನಸಾದರೆ ತಪ್ಪೇನು? ಸುಂದರ ಸ್ವಪ್ನವು ಅನುಭವದಲ್ಲಿ ಬರಬಾರದೆಂದೆಲ್ಲಿಯಾದರೂ ಬರೆದಿದೆಯೆ? ನಮ್ಮ ಸ್ನೇಹದ ಈ ಮಿಲನಕ್ಕೆ ಆ ಚಂದ್ರನೇ ಸಾಕ್ಷಿ. ಇನ್ನೇನು, ಇದು ಇದು ನಿಜವೋ ಕನಸೋ ಎಂಬುದನ್ನು ನೀವೇ ನಿರ್ಧರಿಸಿರಿ" ಎಂದು ಅವನನ್ನು ಚುಂಬಿಸಿದಳು.

## ೧೪

ಹೀಗೆ ನಾಲ್ಕಾರು ದಿನಗಳು ಕಳೆದವು. ಕುಸುಮಳು ಸತ್ಯನಾರಾಯಣರಾಯರ ಕಣ್ಣಿಗೆ ಬೀಳುವ ಗೋಜಿಗೆ ಹೋಗಲೇ ಇಲ್ಲ.

ನಾಟಕವಾದ ಮಾರನೆ ದಿನ ಮುಂಜಾನೆ ಹತ್ತು ಗಂಟೆ ಸಮಯ, ಕುಸುಮಳು ದೊಡ್ಡಮ್ಮನ ಮನೆಗೆ ಬಂದು ಸ್ನಾನಮಾಡಿ, ಸೀರೆ ಬದಲಿಸಿಗೊಂಡು ತನ್ನ ಕೈಪೆಟ್ಟಿಗೆಯನ್ನು ಸರಿಮಾಡಿಕೊಳ್ಳುತ್ತಿರಲು, ಅನಸೂಯೆ ಅವಳನ್ನು ಸಮೀಪಿಸಿ "ನಿನ್ನೆ ಜತೆಯಲ್ಲಿದ್ದ ಇಬ್ಬರಲ್ಲಿ ಯಾರೂ ನಿನ್ನನ್ನುಪ್ರೀತಿಸುವವರು?" ಎಂದು ಕೇಳಿದಳು.

"ಏನದು ಪ್ರೀತಿಸುವುದೆಂದರೆ?"

"ಅವರಿಬ್ಬರಲ್ಲಿ ಯಾರು ನಿನ್ನ ಆಪ್ತ ಮಿತ್ರರು ಎಂದೆ."

"ಇಬ್ಬರೂ ನನಗೆ ಹತ್ತಿರದವರೇ"

ಸ್ವಲ್ಪ ಸಮಯ ಸುಮ್ಮನಿದ್ದು, ಕುಸುಮಳನ್ನು ದಿಟ್ಟಿಸಿ ನೋಡುತ್ತ "ಎಲ್ಲಿಗೋ ಪ್ರವಾಸದ ಮೇಲೆ ಹೊರಡುವ ಹಾಗಿದೆಯಲ್ಲ?" ಎಂದು ಕೇಳಿದಳು.

"ಅಹುದು"

"ಎಲ್ಲಿಗೆ? ಎಂದು ತಿರುಗಿ ಬರುವಿ?"

"ಇನ್ನೂ ಸ್ಪಷ್ಟ ನಿಶ್ಚಯವಾಗಿಲ್ಲ. ಮತ್ತೆ ಬರೋ ವಾರದಾಗ ನಾಟಕಾಂತೆ. ಅಷ್ಟು ಹೊತ್ತಿಗೆ ಖಂಡಿತ ಬಂದು ಬಿಡುತ್ತೇನೆ"

ಅದಿರಲಿ, ಇಲ್ಲಿಂದ ಹೋಗುವುದಕ್ಕಿಂತ ಮುಂಚೆ ಆ ರಾಯನ ಮನೆಗಿಷ್ಟು ಹೋಗಿ ಬರಬಾರದೆ, ಮಹಾರಾಯುಳೇ?"

"ನನಗೆ ವೇಳೆ ಇಲ್ಲ. ನೀನೇ ಹೇಳಿ ಬಿಡಬಾರದೆ? ಆತ ಇಲ್ಲಿಗೆ ಬಂದ್ರೆ ಅವಸರದಿಂದ ನಾನು ಹೊರಡಬೇಕಾಯ್ತೆಂದು ಹೇಳು" ಎಂದು ನಯವಾಗಿ ಹೇಳಿದ ಕುಸುಮಳ ಮಾತುಗಳಿಗೆ ಮಾರುತ್ತರ ಹೇಳದೆ ಅನಸೂಯಳು ಸುಮ್ಮನಿದ್ದಳು.

ಮುಂದೆ ನಾಲ್ಕೈದು ದಿನಗಳ ವರೆಗೆ ಕುಸುಮಳ ವಿಷಯ ಸತ್ಯನಾರಾಯಣರಾಯರಿಗಾಗಲಿ, ಅನಸೂಯಳಿಗಾಗಲಿ ಏನೂ ತಿಳಿಯಲಿಲ್ಲ.

ರಾಯನು ಮಾತ್ರ ದಿನವೂ ಹುಚ್ಚು ಹಿಡಿದವರಂತೆ ದಿನಕ್ಕೆರಡು ಸಲ ಅನಸೂಯಳ ಮನೆಗೆ ಬಂದು ವಿಚಾರಿಸಿಕೊಂಡು ಹೋಗುತ್ತಿದ್ದನು. ತನ್ನ ಎಲ್ಲಾ ಕತೆಯನ್ನೂ, ಮನೆಯಲ್ಲಿ ಕುಸುಮಳು ಇದ್ದ ಸಮಯದಲ್ಲಿ ತನಗಿರುತ್ತಿದ್ದ ಹುರುಪನ್ನೂ ವಿವರಿಸಿ ಒಂದೊಂದು ಸಲ ಅತ್ತುಬಿಡುತ್ತಿದ್ದನು. "ಇಂತಹ ವಯಸ್ಸಿನಲ್ಲಿ ಕುಸುಮಳಂಥವರ ಸಹಾಯ ಅಗತ್ಯ ಬೇಕಾಗಿತ್ತು" ಎಂದನು. ಅನಸೂಯಳು ಆದಷ್ಟು ಸಮಾಧಾನ ಹೇಳಿ, ವಿಷಯ ಕೈಮೀರಿ ಹೋಗಿಲ್ಲವೆಂದು ಧೈರ್ಯ ಹೇಳುತ್ತಿದ್ದಳು.

"ಅಲ್ಲಾ, ಇಷ್ಟು ಅನುಭವವಿದ್ದ ನಿಮ್ಮಂಥಾ ಶ್ರೀಮಂತರೆದುರು, ಹುಡುಗರೂ, ಯುವಕರೂ ಏನೂ ತಿಳಿಯದವರೂ ಪೈಪೋಟಿಗೆ ಬರುವುದೆಂದರೆ ಆಶ್ಚರ್ಯವೆನಿಸುತ್ತಿದೆ. ನಿಮ್ಮ ರಸಿಕತೆಯೆಲ್ಲಿ ಹಾಳಾಗಿ ಹೋಯಿತು?" ಎಂದು ಅನಸೂಯಳು ಕೇಳಿದಳು.

"ಕುಸುಮಳಿನ್ನೂ ಏನೂ ತಿಳಿಯದ ಹಸುಗೂಸು. ಪ್ರೇಮರಾಜ್ಯದಲ್ಲಿ ಅವಳಿಗೆ ಅನುಭವವಾದರೂ ಏನು? ಅವಳಿಗೆ ಬೇಕಾದುದು ಸರಿವಯಸ್ಸಿನ ಜೋಡು. ಇದೇ ತಾನೆ? ಮುಂದಿನ ವಿಚಾರದ ವಿಷಯಗಳು ಇವಳಿಗೆ ಹೇಗೆ ಹೊಳೆಯಬೇಕು?"

"ಏನೂ ತಿಳಿಯದ ಈ ಹುಡುಗಿ, ಯೌವನದ ಭರದಲ್ಲಿ, ಹಿಂದು ಮುಂದಿನ ಯೋಚನೆಯಿಲ್ಲದೆ, ಎಲ್ಲಿ ಮೋಸ ಹೋಗುವಳೋ ಎಂದು ನನಗೆ ಯೋಚನೆಯಾಗಿದೆ. ಹಠದ ಹುಡುಗಿ. ಇನ್ನೂ ಹುಡುಗುತನ. ತನಗೆ ತಿಳಿಯೋದಿಲ್ಲ. ಇನ್ನೊಬ್ಬರು ಹೇಳಿದ್ದು ಕೇಳುವಷ್ಟು ತಾಳ್ಮೆ ಇಲ್ಲ. ಆ ಇಬ್ಬರೂ ಇವಳನ್ನು ಗುಂಗಿನಲ್ಲಿ ಕೆಡವಿ ಆ ಮೇಲೆ ನಡುನೀರಿನಲ್ಲಿ ಕೈಬಿಟ್ಟರೆ ಇವಳ ಗತಿ ಏನಾಗಬೇಕು? ಇವಳನ್ನು ಮದುವೆ ಮಾಡಿಕೊಳ್ಳಬೇಕೆಂಬ ಅವಶ್ಯಕತೆ ಅವರಿಗೆ ಎಲ್ಲಿದೆ? ಇವರೊಂದು ವೇಳೆ ಒಪ್ಪಿದರೂ ಕುಲವಿಲ್ಲದ ಈ ಹೆಣ್ಣನ್ನು ಮದುವೆಯಾಗಲು ಸಂಪ್ರದಾಯವಂತರಾದ ಇವರ ಮನೆಯವರು ಸಮ್ಮತಿಸಬೇಕಲ್ಲ? ಮನೆಯಿಂದ ಹೊರಗೆ ಹಾಕಬಹುದು. ಸಮಾಜದಿಂದ ದೂರಿರಬೇಕಾಗಬಹುದು. ಅನೇಕ ಕಷ್ಟಗಳನ್ನು ಅನುಭವಿಸಬೇಕಾಗಬಹುದು. ಇಷ್ಟೆಲ್ಲ ದುಃಖಗಳನ್ನು ಎದುರಿಸುವ ಸಾಹಸ, ಧೈರ್ಯ ಇವರಲ್ಲಿರಬೇಕಲ್ಲ?

ಅಲ್ಲಾಂದ್ರೆ ಒಬ್ಬ ಹುಡುಗೀ ಹಿಂದೆ ಇಬ್ಬರಿದ್ದಾರಲ್ಲ. ಇಲ್ಲೀ ಗೊಂದಲ ಬರಬಹುದು. ಇದೇನೋ ಕುಸುಮಳ ಜೀವಕ್ಕೆ ಸುಖ ಸಂತೋಷ ತರುವಂತೆ ಕಾಣಿಸುವುದಿಲ್ಲ. ಎಲ್ಲಿ ಮೋಸ ಹೋಗುತ್ತಾಳೋ ಅಂತ ನನ್ನ ಯೋಚನೆ'' ಎಂದು ಉದ್ಗಾರ ತೆಗೆದಳು. ಇಂಥಾ ಸಹಾನುಭೂತಿಯ ಮಾತುಗಳು ಸತ್ಯನಾರಾಯಣರಾಯನಿಗೆ ಧೈರ್ಯವನ್ನು ತಂದು ಕೊಟ್ಟವು.

"ನಾನೇನು ಮಾಡೀನಿ? ಏನು ಮನ್ಯಾಗೆ ಯಾರೂ ಇಲ್ಲಾಂತ ಇವಳೊಬ್ಬಳು ಇದ್ದು ಬಿಡಲೀಂತ ನೆನೆದೆ. ಅವಳಿಷ್ಟ. ನಾನು ಮದುವೆಯಾಗ್ತೀನೀಂತ ಹೇಳಿದಾಗ ನನಗೆ ಮೋಸ ಮಾಡಿ ಇನ್ನೊಬ್ಬರ ಹಿಂದೆ ಓಡಿಹೋಗೋದು ನ್ಯಾಯವಲ್ಲ. ನನಗೊಂದು ಮಾತಾದ್ರೂ ಹೇಳಿ ಹೋಗಬಾರದೆ? ಅಲ್ಲಾ, ಎಷ್ಟು ಮರ್ಯಾದೆಯಿಂದ ನಡೆದುಕೊಂಡೆ; ಮನೆಯಲ್ಲಿ ಎಷ್ಟ ಸ್ವತಂತ್ರ ಕೊಟ್ಟೆ. ಏನುಮಾಡಿ ಏನು ಪ್ರಯೋಜನ?" ಎಂದು ರಾಯನು ತನ್ನ ದುಃಖವನ್ನು ಮತ್ತೆ ತೋಡಿಕೊಂಡನು.

ಇತ್ತ ಕುಸುಮ-ಪ್ರಭಾಕರ ಪ್ರಣಯ ಪ್ರವಾಸದಲ್ಲಿ ಯಾವ ನಿರ್ಬಂಧವೂ ಇರಲಿಲ್ಲ. ಅವರಾಡುವ ಮಾತುಗಳು ಕವಿತೆಯಂತೆ ಸರಳ ಸುಖಮಯ, ಅರ್ಥಗರ್ಭಿತವಾಗಿದ್ದವು. ಕಾಲವು ಸಾಗನುವಾಗ, ಗಾಳಿಗೂ ಹಗುರಾಗಿ ತೇಲಿ ಹೋಗುತಿತ್ತು. ಪ್ರೇಮ ಅವರ ಸುತ್ತಲೂ ಊದುಬತ್ತಿಯ ಹೊಗೆಯಂತೆ ಸುತ್ತಿಕೊಂಡು ಬಾಹ್ಯ ಪ್ರಪಂಚ ಕಾಣಿಸದಂತೆ, ಹೊರಗಿನ ದುಃಖಗಳು ಹತ್ತಿರ ಬಾರದಂತೆ, ಅದೊಂದು ಬಗೆಯ ಮಾಯೆಯಂತೆ ಕವಿದುಕೊಂಡಿತ್ತು. ಎಲ್ಲಿಯೂ ಸುಖದ ಸವಿ ನುಡಿಯೇ. ಯಾವ ಮಾತಿನಲ್ಲಿಯೂ ಪ್ರೇಮದ ಸುಧಾರಸವೇ. ಎಂಥ ನಡತೆಯಲ್ಲಿಯೂ ಪ್ರೀತಿಯ ಹೃದಯಗಳ ಮಿಲನವೇ. ಇವರಿಬ್ಬರೂ ಕೆಲವೊಂದು ವೇಳೆ ಸುಮ್ಮನೇ ಒಬ್ಬರನ್ನೊಬ್ಬರು ನೋಡುತ್ತ ಕುಳಿತು ಬಿಡುವರು. ಮೌನದ ಸಂಕೇತದಲ್ಲಿಯೇ, ಅವರ ಪ್ರೇಮವು ಹೊರ ಚಿಮ್ಮುತಿತ್ತು. ಮತ್ತೊಂದು ಸಮಯ ಕೈಕೈ ಸೇರಿಸಿ ಸಾಯಂಕಾಲದ ತಂಪಿನಲ್ಲಿ ನಿರ್ಜನ ಪ್ರದೇಶದಲ್ಲಿ ಅದೆಷ್ಟೋ ದೂರ ಹಾದಿ ನಡೆಯುತ್ತಿದ್ದರು. ಮಾತಿಗಾಸ್ಪದವೇ ಇರಲಿಲ್ಲ. ಇನ್ನೊಂದು ವೇಳೆ ಮಾತಿನ ಸರಣಿಯಲ್ಲಿ ಅಲ್ಲ ಸಲ್ಲದ ಅರ್ಥಗಳನ್ನು ಕಲ್ಪಿಸಿ ಯಾವ ನಿರ್ಧಾರಕ್ಕೂ ಬಾರದೇ ಸುಮ್ಮನಾಗುತ್ತಿದ್ದರು. ಒಬ್ಬರನ್ನೊಬ್ಬರು ಪ್ರೀತಿಸಿ, ತಮ್ಮ ಪ್ರೇಮದಿಂದ ಜೀವನವನ್ನು ಅಮರವಾಗುವಂತೆ ಮಾಡುವುದೇ ತಮ್ಮ ಕರ್ತವ್ಯವೆಂದು ತಿಳಿದಿದ್ದರು. ದೈವಸಂಯೋಗದಿಂದ ತಾವಿಬ್ಬರೂ ಈ ಪ್ರೇಮ ರಾಜ್ಯದಲ್ಲಿ ಪರಸ್ಪರ ಇರಬಹುದಾದ ಲೋಪ ದೋಷಗಳನ್ನು ಮರೆತು ತಮ್ಮ ಭಾವೀ ಜೀವನದ ಹಾದಿ ಏನೆಂಬುದನ್ನು ತಿಳಿಯದೆ, ಕುರುಡರಂತೆ ಹಾದಿ ಸಾಗಿಸಲು ನಿರ್ಧರಿಸಿದ್ದರು ಮದುವೆಯಾಗದ ಈ ಪ್ರೇಮ ಜೀವಿಗಳು; ಸರಿ ಜೋಡಿನ ಸಂಗಡಿಗರು.

ಕುಸುಮಳು ಸ್ವತಃ ಉದ್ರೇಕದ ಸ್ವಭಾವದವಳಲ್ಲ. ಉದ್ರೇಕವು ಮನುಷ್ಯನಜೀವನದಲ್ಲಿಯ ಸೊಬಗನ್ನು ಸುಖವನ್ನು ಕೆಲಮಟ್ಟಿಗೆ ಹಾಳು ಮಾಡುವುದೆಂದು ಆವಳ ನಂಬಿಕೆ. ಇದು ಕುಸುಮಳಿಗೆ ತಿಳಿದ ವಿಷಯ

ವಾಗಿತ್ತು. ಇಲ್ಲಿಯ ವರೆಗೆ ಕುಸುಮಳು ಯಾವ ರೀತಿಯಲ್ಲಿಯೂ ಉದ್ರೇಕಗೊಂಡಿರಲಿಲ್ಲ. ಅತಿಯಾದ ಆಶೆ ತೋರಿಸುವುದರಿಂದ, ನೋಡುವವರಿಂದ ಅಸೂಯೆಗೊಳಗಾಗುವುದು, ಅನಂತರ ವ್ಯಥೆ ಪಡುವುದು, ಅವಳಿಗೆ ಬೇಡಾಗಿತ್ತು. ಈ ಪ್ರೇಮ ರಾಜ್ಯದಲ್ಲಿಯೂ ಹೆಚ್ಚಿನ ಉದ್ರೇಕದಿಂದ ದೂರಿರಬೇಕೆಂಬುವುದೇ ಕುಸುಮಳ ನಿರ್ಧಾರವಿತ್ತು. ಆದರೆ ಪ್ರಭಾಕರನ ಜತೆಯಲ್ಲಿ ಈ ತರಹದ ನಿರ್ಧಾರ ನಿಯಮಗಳ ಪಾಲನೆ ಅಶಕ್ಯವೆನಿಸಿತು. ಪ್ರಭಾಕರನ ಪ್ರಭಾವ ವಲಯದಲ್ಲಿ ಸಿಕ್ಕಿಬಿದ್ದ ಕುಸುಮಳು ಪೂರ್ಣ ಒಪ್ಪಿಗೆಯಿಂದ, ಅವನನ್ನು ಪ್ರೀತಿಸಿದ್ದಳು. ಅವನೊಂದಿಗೆ ಒಬ್ಬಳೇ ಇದ್ದ ವೇಳೆಯಲ್ಲಿ ಆಲಿಂಗನದಲ್ಲಿದ್ದಾಗ, ಅವನನ್ನು ಬಿಗಿಯಾಗಿ, ತನ್ನ ಕೋಮಲ ಕೈಗಳಿಂದ ತಬ್ಬಿಕೊಂಡು "ದೇವರು ನನಗಿದಕ್ಕಿಂತಲೂ ಹತ್ತರಷ್ಟು ಸಾಮರ್ಥ್ಯವನ್ನು ಕೊಟ್ಟಿದ್ದರೆ ಚೆನ್ನಾಗಿತ್ತಲ್ಲವೇ?" ಎಂದು ಹಲ್ಲುಗಳನ್ನು ಬಿಗಿಹಿಡಿದು ಕೇಳುತ್ತಿದ್ದಳು. ಮತ್ತೊಮ್ಮೆ ಪ್ರಭಾಕರನ ಹತ್ತಿರ ಬಂದು ಕಿವಿಯಲ್ಲಿ "ಘೂ ಕಳ್ಳ" ಎಂದು ಹೇಳುತ್ತಿದ್ದಳು. ಸುಮ್ಮನಿದ್ದ ಪ್ರಭಾಕರನ ಕಪ್ಪು ಕೂದಲುಗಳಲ್ಲಿ ಕೈ ಬೆರಳುಗಳನ್ನಿಟ್ಟು ಅವನ ಕಪೋಲಗಳಿಗೆ ತನ್ನ ಕಪೋಲಗಳನ್ನು ಸವರುತ್ತ ಅದೇ ಧ್ಯಾನದಲ್ಲಿ ಮುಳುಗಿ ಎಷ್ಟೋ ಹೊತ್ತು ಕಳೆಯುತ್ತಿದ್ದಳು. ಅವನನ್ನು ಸ್ವಲ್ಪ ರೇಗಿಸಲು ಒಂದೊಂದು ಸಲ ದವಡೆಯ ಮೇಲೆ ಮೆಲ್ಲನೆ ಏಟನ್ನು ಸಹಾ ಹಾಕುತ್ತಿದ್ದಳು. "ಪ್ರಭಾಕರ, ಈ ನನ್ನ ತುಂಟತನ ನಿಮಗೆ ರುಚಿಸುವವೆ? ಕೋಪ ಬರೋದಿಲ್ಲ ತಾನೆ? ಅಸಹ್ಯವಿಲ್ಲವಷ್ಟೆ? ಎಂದು ಕೇಳುತ್ತಿದ್ದಳು. ಪ್ರಭಾಕರನು ಇಂಥಾ ಪ್ರಸಂಗಗಳಲ್ಲಿ ಸುಮ್ಮನಿರುವುದೇ ಒಳಿತೆಂದು ನೆನೆದು ಯಾವ ಗೋಜಿಗೂ ಹೋಗುತ್ತಿರಲಿಲ್ಲ. ಮೌನ ಅರ್ಥ ಸಮ್ಮತಿಯಲ್ಲವೇ? ಇದು ಕುಸುಮಳಿಗೆ ಸಮಾಧಾನ ತಂದು ಕೊಡುತ್ತಿತ್ತು.

ಪ್ರಣಯದಲ್ಲಿ ಯಾವಾಗಲೂ ಪ್ರೇಮಿಗಳ ಪರಸ್ಪರ ಮಿಲನ, ಹೃದಯವನ್ನರಿಯುವ ತಿಳಿವು, ಅರ್ಥಮಾಡಿಕೊಳ್ಳುವ ಸಹೃದಯತೆ, ಸರಿಪಡಿಸಿಕೊಳ್ಳುವ ಸಹನೆ, ಇರಬೇಕಾದುದು ಅವಶ್ಯ. ಪ್ರೇಮ ವ್ಯವಹಾರದಂತೆ ಏನನ್ನೋ ಯಾರೋ ಒಬ್ಬರು ಕೊಡುವರು, ಇನ್ನೊಬ್ಬ

ರವನ್ನು ಸ್ವೀಕರಿಸುವರೆಂಬ ಮಾತಿನಲ್ಲಿ ಕುಸುಮಳಿಗೆ ಹೆಚ್ಚು ವಿಶ್ವಾಸ ವಿಲ್ಲದಿದ್ದರೂ, ಈಗೀಗ ಅದರ ಅನುಭವವಾಗುತ್ತಿರುವುದರಿಂದ ನಿಜವಿರಬಹುದೆಂದು ಊಹಿಸಿದಳು. ಈ ವ್ಯವಹಾರದಲ್ಲಿ ಹೆಚ್ಚು ಆಸಕ್ತಿ ತೋರಿದುದು ಕುಸುಮಳೇ.

"ಕುಸುಮಾ, ಎಲ್ಲಾ ಮಾತು ನೀನೇ ಆಡಿಬಿಡ್ತಿ. ನಾನು ಸುಮ್ಮನೆ ಮೂಕನಂತೆ ಕೂತು, ನಿನ್ನನ್ನೇ ದಿಟ್ಟಿಸಿ ನೋಡುವುದಷ್ಟೇ ನನ್ನ ಕೆಲಸವಾಗಿದೆ. ಇದು ನಿನಗೆ ಹೇಗೆ ಕಾಣಿಸುತ್ತದೋ ಹೇಳು" ಎಂದು ಪ್ರಭಾಕರನು ಅನೇಕ ಸಲ ಕೇಳಿದ್ದ.

"ಇದು ನನ್ನ ಪ್ರಣಯದ ಕತೆ. ಇದರಲ್ಲಿ ನೀವು ಬರೇ ನನ್ನ ನೆರಳು ಮಾತ್ರ." ಎಂದು ಹೇಳಿ ಪ್ರಭಾಕರನನ್ನು ಸುಮ್ಮನಾಗಿಸಿದಳು.

"ಮಳೆಗಾಲದ ಅಮಾವಸ್ಯೆಯ ರಾತ್ರಿ ನಕ್ಷತ್ರವಿರದ ಆಕಾಶವನ್ನು ನೋಡಿ ಹೊತ್ತು ಎಷ್ಟಾಯಿತೆಂದು ತಿಳಿಯದೇ ಸಂಕಟಪಡುವ ಹಾದಿಗಾರನಂತಾಗಿದೆ ನನ್ನವಸ್ಥೆ. ನೀನು ಬಡಬಡಿಸುವ ಈ ಗೊಂದಲ ದಲ್ಲಿ ನನ್ನ ಪ್ರೇಮದ ಆಳವೆಷ್ಟೆಂಬುವುದು ನನಗೇ ತಿಳಿಯದಾಗಿದೆ. ಆದರೆ ನಿನ್ನದು ನಿರ್ಮಲ ಹೃದಯ; ನೀನು ನನಗೆ ನೀಡುವುದು ಕಳಂಕ ರಹಿತವಾದ ಪ್ರೇಮವೆಂಬುದನ್ನು ತಿಳಿದಿದ್ದೇನೆ. ಇದನ್ನು ಮಾತ್ರ ನೀನು ಶಂಕಿಸಬೇಕಾಗಿಲ್ಲ."

"ಅಂದು ನಿಮ್ಮನ್ನು ನಾಟಕದಲ್ಲಿ ನೋಡಿದ ಕ್ಷಣದಿಂದ ನನ್ನ ಒಳ್ಳೆಯ ದಿನ ಆರಂಭವಾಯಿತೆಂದು ನಾನು ತಿಳಿದಿದ್ದೇನೆ. ನಾನು ಕಷ್ಟ ಪಡುವ ಕಾಲ, ಅಲೆದಲೆದು ಪರದೇಶಿಯಾಗಿ ದುಃಖಪಡುವ ಕಾಲ, ತಬ್ಬಲಿಯಾಗಿ, ಅನಾಥೆಯಾಗಿ ಉಳಿಯುವ ಕಾಲ ದೂರಾಯಿತೆಂದು ನೆನೆದೆ. ನಿಮ್ಮ ದರ್ಶನದಿಂದ ನನಗೆಲ್ಲಿಯೂ ಇಲ್ಲದ ಹಿಗ್ಗು, ಹುಮ್ಮಸ ಬಂದೊದಗಿದೆ. ಹೊಸ ಚೈತನ್ಯ ಬಂದಿದೆ. ನಾನು ನೆನೆದಂತೆ ನಿಮ್ಮ ಆಶ್ರಯದ ನೆರಳು ದೊರೆಯಿತು. ಸಾಕು. ನನಗಿನ್ನೇನು ಬೇಕು? ಕುಲವಿಲ್ಲದ ಹೆಣ್ಣಿಗೆ ಕುಲವನ್ನು ದಾನ ಮಾಡಿದಿರಿ" ಎಂದು ಹೇಳಿ ಸುಮ್ಮನಾದಳು.

ಪ್ರಭಾಕರನಿಗೆ ಈ ಕಡೆಯ ವಾಕ್ಯ ಅರ್ಥವಾಗಲಿಲ್ಲ. ಈಗೇಕೆ ಅದರ ಗೊಡವೆಯೆಂದು ಸುಮ್ಮನಿದ್ದು ಬಿಟ್ಟ.

ಒಂದು ವಾರದ ನಂತರ ಕುಸುಮಳು ಮನೆಗೆ ಬಂದ ಕೂಡಲೆ ಅನಸೂಯಳು ಅವನ ವರ್ತನೆಯ ನಿಜಾಂಶವನ್ನು ತಿಳಿಯಲು "ನಿನಗೂ ನಿನ್ನ ಆಪ್ತ ಸ್ನೇಹಿತರಿಗೂ ಇರುವ ಸಂಬಂಧವೇನು? ಕುಸುಮಾ, ನಿನ್ನ ವರ್ತನೆಯಲ್ಲಿ ತಪ್ಪು ಕಂಡು ಹಿಡಿಯುವೆನೆಂದು ಭಾವಿಸಬೇಡ. ನನಗೀಗಾಗಲೇ ಈ ಪ್ರಪಂಚದಲ್ಲಿ ಆಗಿರುವ ಅನುಭವದ ಸಹಾಯ ನಿನಗಾಗಲಿ. ಮುಡುಕಿ ನೀನು ವ್ಯಥೆಪಟ್ಟು ಎಲ್ಲರಿಂದಲೂ ಬಹಿಷ್ಕೃತಳಾಗಿ ದುಃಖಪಡಬಾರದೆಂಬ ಸದುದ್ದೇಶದಿಂದ ನಿನಗೆ ಸಹಾಯಮಾಡಬೇಕೆಂದು ಕೇಳುತ್ತೇನೆ" ಎಂದು ಕೇಳಿದಳು.

"ಬೇರೆ ಏನೂ ಇಲ್ಲ. ಅವರು ನನಗೆ ತಿಳಿದ ಜನರು. ನನ್ನ ಆಪ್ತ ಸ್ನೇಹಿತರಷ್ಟೆ" ಎಂದಳು ಕುಸುಮ. ಪ್ರಭಾಕರನಲ್ಲಿ ತನಗಿರುವ ಪ್ರೇಮ, ಅವನೊಡನೆ ಬೆಳೆಸಲಿರುವ ಪ್ರೇಮಮಯ ಜೀವನ ರಹಸ್ಯವು ಅನಸೂಯಳಿಗೆ ತಿಳಿಯುವುದೇಕೆಂದು ತರ್ಕಿಸಿ, ಆ ಗುಟ್ಟನ್ನು ತಿಳಿಯಗೊಡಲಿಲ್ಲ.

" ಆ ಇಬ್ಬರಲ್ಲಿ ನಿನ್ನನ್ನು ಯಾರಾದರೊಬ್ಬರು ಮದುವೆ ಯಾಗುವರೇನು?''

"ನಾನು ಆ ವಿಷಯವನ್ನೀಗ ನಿರ್ಧರಿಸಿಲ್ಲ. ನಾನವರ ಹಿಂದೆ ತಿರುಗುತ್ತಿರುವುದು ಮದುವೆಯ ಭಿಕ್ಷೆ ಬೇಡುವುದಕ್ಕಲ್ಲ" ಈ ಮಾತುಗಳನ್ನು ಹೇಳುವಾಗ ಕುಸುಮಳ ಮುಖವು ಗಂಭೀರಾಕೃತಿಯನ್ನು ತಾಳಿದ್ದಿತು. ತನ್ನಲ್ಲಿ ಉಚ್ಚಕುಲದ ರಕ್ತವು ಹರಿಯುತ್ತಿರುವುದೆಂಬ ಭಾವನೆ ಅವಳ ದಿಟ್ಟ ನೋಟದಲ್ಲಿ ಕಾಣುತ್ತಿತ್ತು.

"ಅವರಿಬ್ಬರೂ ಬ್ರಹ್ಮಚಾರಿಗಳೆ?" ಎಂದು ಮತ್ತೆ ಮಾತನ್ನು ಅನಸೂಯಳು ಮುಂದುವರಿಸಿದಳು.

"ಅದನ್ನು ಸಹಾ ತಿಳಿದುಕೊಳ್ಳುವ ಗೋಜಿಗೆ ನಾ ಹೋಗಿಲ್ಲ."

ಇಲ್ಲಿಗೆ ಅನಸೂಯಳಿಗೆ ಹಿಡಿಸಲಾರದಷ್ಟು ತಾಪವಾಯಿತು. "ಹುಚ್ಚೀ, ನಿನಗೀ ಜನ್ಮದಲ್ಲಿ ಮದುವೆಯಾಗದಂಥಾ ಕಳಂಕವನ್ನು ತಂದೊಡ್ಡುವರು ಈ ನಿನ್ನ ಆಪ್ತಮಿತ್ರರು. ಈ ಯೋಚನೆ ಏನಾದರೂ

ಹೊಳೆದಿದೆಯೆ? ನಿನ್ನ ಈ ವರ್ತನೆ ನಿಷ್ಕಳಂಕವಾಗಿರಬಹುದು. ಆದರೆ ಅವರೊಂದಿಗೆ ನೀನು ಕೆಲಕಾಲ ಇದ್ದು ಬಿಟ್ಟೆಯೆಂದರೆ ಸಮಾಜವು ನಿನ್ನಂತೆಯೇ ಯೋಚಿಸುವುದೆ? ಅದು ತನ್ನ ನಿಯಮದಂತೆ ನಡೆದು ಕೊಳ್ಳುವುದು. ಅದು ಹಾಳಾಗಲಿ. ನಿನ್ನನ್ನು ಮದುವೆಯಾಗಲಿಚ್ಛಿಸುವ ಜನರಾದರೂ ಯೋಚನೆಗೊಳಗಾಗುವರು ನಿನ್ನ ಈ ಸ್ವೇಚ್ಛಾ ವೃತ್ತಿಯನ್ನು ನೋಡಿ. ಅವರ ಬಾಯಿ ಮುಚ್ಚಿಸುವುದಾದರೂ ಹೇಗೆ ಹೇಳು. ಈ ಸ್ನೇಹ ಕೊನೆಯ ವರೆಗೂ ಉಳಿಯುವುದೆ? ನಾಳೆ ಅವರ ಮನೆಯವರು ಅವರಿಗೆ ಮದುವೆ ಮಾಡಿದರೆಂದರೆ, ಹೀಗೆ ನಿನ್ನ ಬೆನ್ನ ಹಿಂದೆ ತಿರುಗುವುದು ಸಾಧ್ಯವೆ? |ಅವರ ಹೆಂಡಂದಿರಾದರೂ ಸುಮ್ಮನಿರುವರೆ? ನೀನಿನ್ನೂ ಚಿಕ್ಕವಳು. ಸ್ವಲ್ಪ ಎಚ್ಚರಿಕೆಯಿಂದಿರುವುದು ಒಳ್ಳೆಯದಲ್ಲವೆ? ಎಷ್ಟು ಕೆಟ್ಟಿದ್ದರೂ ನಾನು ನಿನಗಿಂತಲೂ ವಯಸ್ಸಾದವಳಲ್ಲವೆ? ಯೋಚಿಸಿ ನೋಡು" ಎಂದು ಹೀಗೆ ಮನಸ್ಸಿಗೆ ನಾಟುವಂತೆ ಆಡಿದ ಮಾತುಗಳ ಉದ್ದೇಶವೇನಿರಬಹುದೆಂದು ಕುಸುಮಳು ಯೋಚಿಸಿದಳು.

ಈ ರೀತಿ ಅನಸೂಯೆ ತನ್ನ ಬಗ್ಗೆ ಮಾತನಾಡುವುದು ಅವಳಿಗೆ ರುಚಿಸಲಿಲ್ಲ. ಆದರೆ ದೊಡ್ಡಮ್ಮನು ಯಾವ ಬಗೆಯ ಕೆಟ್ಟ ಹೃದಯದಿಂದ ಈ ಉಪದೇಶ ಮಾಡುತ್ತಿರಲಿಲ್ಲವೆಂದು ಅವಳಿಗೆ ಕಂಡುಬಂತು. ಇಷ್ಟವಿಲ್ಲದಿದ್ದರೂ ದೊಡ್ಡಮ್ಮನಿಗೆ ತಿಳಿದಿರಲೆಂದು "ಈಗ ಮದುವೆ ಎಂಬ ಮಾತು ನೀನು ನೆನೆದಷ್ಟು ಮುಖ್ಯ ಗಮನಿಸಬೇಕಾದ ವಿಷಯವಲ್ಲ. ಈ ಸ್ನೇಹ ಕಡೆಯ ವರೆಗೆ ಉಳಿಯದೆ ಹೋದರೂ ಚಿಂತೆಯಿಲ್ಲ. ಆದರೆ ಇದರ ನಡುವೆ ಇನ್ನಾವ ಕೆಟ್ಟ ನಡತೆಗೆ ನಾನು ತುತ್ತಾಗದೇ ಉಳಿದರೆ ನನಗದು ಹೆಮ್ಮೆಯ ಮಾತಲ್ಲವೆ?" ಎಂದು ಹೇಳಿದ ಮಾತುಗಳ ಅರ್ಥವನ್ನು ಸರಿಯಾಗಿ ಮಾಡಿಕೊಳ್ಳದೆ ಅನಸೂಯಳು "ಏನೋಮ್ಮಾ. ಓದಿಕೊಂಡವರು ನೀವು. ಈ ಹೊಸ ಭಾವನೆಗಳ ಪ್ರಯೋಗ, ಅರ್ಥ ಗಿರ್ಥ ನನಗೊಂದೂ ತಿಳಿಯೋದಿಲ್ಲ. ನಿನಗೂ ವಯಸ್ಸಾಗಿದೆ. ಎಚ್ಚರಿಕೆ ಇರಲೆಂದು ಎರಡು ಮಾತು ಹೇಳಿದೆ. ಇರಲಿ, ಆ ರಾಯನ ವಿಷಯ ಏನು ಮತ್ತೆ? ಪಾಪ 'ನಡು ನೀರಲಿ ಕೈಯ ಬಿಡುವಳೆ' ಎಂದು ಗೋಳಾಡ್ತಾನೆ" ಎಂದು ಮೆಲ್ಲನೆ ಎಚ್ಚರಿಸಿದಳು.

ದೊಡ್ಡಮ್ಮ ಸತ್ಯನಾರಾಯಣರಾಯನ ವಕೀಲಿ ವಹಿಸಿ ಅವನ ಪರವಾಗಿ ಸಹಾನುಭೂತಿಯಿಂದ ಮಾತನಾಡಿದುದು ಇದೇ ಮೊದಲನೆಯ ಸಲ. ಅವಳ ಈ ದುಡುಕುತನ ಕುಸುಮಳಿಗೆ ಆಶ್ಚರ್ಯವನ್ನುಂಟು ಮಾಡಿತು. ತನ್ನನ್ನು ಉದ್ಧರಿಸುವುದು ಬಿಟ್ಟು ಮತ್ತೆ ಹಳೆಯ ಹಾದಿಯನ್ನು ಅನುಸರಿಸಬೇಕೆಂದು ಹೇಳುವ ಅನಸೂಯಳ ಈ ನೀಚ ವೃತ್ತಿಗನುಗಣವಾದ ಮನಸ್ಸಿಗೆ ಒಳಗೇ ಮರುಗಿದಳು. ಜನಗಳು ಸುಧಾರಿಸಬೇಕು. ನಾಡು ಮುಂದರಿಯಬೇಕು. ಹೊಸ ಜನಾಂಗವು ತಲೆದೋರಬೇಕು. ಅಂತಹ ಕರ್ತೃತ್ವಶಾಲಿಗಳಿಂದ ಎಲ್ಲೆಲ್ಲಿಯೂ ಹುರುಪು, ಹೊಸ ಚೈತನ್ಯವೇ ತಲೆದೋರಿ ದೇಶೋದ್ಧಾರವಾಗಬೇಕೆಂಬ ಭಾವನೆ ಇಲ್ಲದೆ ಈ ಹಾಳು ಕೂಪದಲ್ಲಿದ್ದು, ಕೊಳೆತು, ಬಾಳು ಕೀಳಾಗಿಸುವ ಇವರ ಜೀವನಕ್ಕೆ ಧಿಕ್ಕಾರವೆಂದು ನೆನೆದಳು. ಇಂತ ಸಂಧಿಕಾಲದಲ್ಲಿ ಜನ್ಮತಾಳಿದ ತನ್ನ ಕರ್ತವ್ಯವೇನು?........ಯೋಚನೆಗೆ ಎಡೆ ಎಲ್ಲಿದೆ? ಹಿಂದೆ ತಾನು ನಿರ್ಧರಿಸಿದ ಹಾದಿಯೆ; ಪ್ರಭಾಕರನೊಂದಿಗೆ ಹೊಂದಿಕೊಂಡು ಹೊಸ ಜನಾಂಗದ ನಿರ್ಮಾಣಕ್ಕೆ .ಸಹಾಯಕಳಾಗುವುದೇ ಸುಗಮವಾದ ಹಾದಿ.

ಈ ರೀತಿಯಲ್ಲಿ ಸ್ವಲ್ಪ ಹೊತ್ತು ಯೋಚನೆಯಲ್ಲಿದ್ದು ಕುಸುಮಳು "ನನಗೆ ಸತ್ಯನಾರಾಯಣರಾಯರನ್ನು ಮದುವೆಯಾಗುವ ಯೋಚನೆಯೇ ಇಲ್ಲ. ಮಾಡಿಕೊಳ್ಳುವ ಅಗತ್ಯವಾದ ಅವಸರವೂ ಈಗ ಬಂದಿಲ್ಲ. ನಾನೀ ಮಾತು ಅವರ ಮುಂದೆ ಸ್ಪಷ್ಟ ಹೇಳಿ ಬಿಡುತ್ತೇನೆ" ಎಂದು ಹೇಳಿದಳು.

"ನಿನ್ನ ಕ್ಷೇಮದ ಹಾದಿ ನಿನಗೇ ತಿಳಿಯದಾದರೆ ನಾನೇನು ಮಾಡಲಿಕ್ಕಾಗುತ್ತದೆ? ಇದಕ್ಕಿಂತ ಒಳ್ಳೇ ಮನೆತನದ ಮನುಷ್ಯ ನಿನಗೆ ದೊರೆಯಲಾರ".

ಈ ಮಾತುಗಳು ಶೂಲದಂತೆ ಚುಚ್ಚಿ, ಕುಸುಮಳ ಹೃದಯವನ್ನು ಕಲಕಿದವು.

"ದೊಡ್ಡಮ್ಮಾ, ನಿನ್ನುಪಕಾರ ಮರೆಯಲಾರೆ. ನನಗಿವನಿಗಿಂತಲೂ ಒಳ್ಳೆಯ ಮನುಷ್ಯನು ಸಿಕ್ಕಿರುವನು. ನನ್ನ ಬಗ್ಗೆ ನಿಮ್ಮಂಥವರಿಗೇಕೆ

ಈ ಬಗೆಯ ನೀಚ ಅಭಿಪ್ರಾಯಗಳು ತಲೆದೋರುತ್ತವೆ?"

"ಯಾರವನು?"

"ಪ್ರಭಾಕರರಾಯರು. ಮೊನ್ನೆ ನಾಟಕದಲ್ಲಿ ನಾಯಕನ ಪಾತ್ರ ವಹಿಸಿದವರು"

"ನೀನಾರೆಂಬುವುದು ಅವನಿಗೆ ತಿಳಿದಿದೆಯೆ?"

"ಆ ವಿಷಯ ಚರ್ಚೆಗೆ ಬರಲೇ ಇಲ್ಲ. ನಮ್ಮಿಬ್ಬರ ಹೃದಯಗಳೊಂದಾಗಿವೆ. ಪರಸ್ಪರ ಪ್ರೀತಿಯಿದೆ. ತಿಳಿದಿರಲಿಕ್ಕೆ ಸಾಕು. ಇದರಲ್ಲಿ ರಹಸ್ಯವೆಲ್ಲಿದೆ?"

"ನಿನ್ನನ್ನು ಮದುವೆಯಾಗುವೆನೆಂದು ವಚನ ಕೊಟ್ಟಿರುವನೇನು?"

"ಕೊನೆಗೆ ನನ್ನನ್ನು ಗೆಳತಿಯೆಂದಾದರೂ ಭಾವಿಸುವರು. ನನಗದೇ ಸಾಕು." ಈ ಮಾತುಗಳು ಹೊರ ಬೀಳುವಾಗ ಕುಸುಮಳ ಕಣ್ಣುಗಳು ಕೆಂಪೇರಿದ್ದವು. ಪ್ರಜ್ವಲಿಸುವ ಕೋಪವನ್ನು ಹತ್ತಿಕ್ಕಿ ಮಾತನಾಡುವಾಗ ಅವಳ ಮೈಯೆಲ್ಲವೂ ಬೆವರ ಹತ್ತಿತು. ಅದನ್ನು ತೋರಗೊಡದೆ ತುಟಿ ಅವುಡುಗಚ್ಚಿಹಿಡಿದು ಬೇರೊಂದು ಕಡೆ ನೋಡುತ್ತ ಸುಮ್ಮನೇ ನಿಂತು ಬಿಟ್ಟಳು.

ಇದು ವಿಕೋಪಕ್ಕಿಟ್ಟು ಕೊಂಡಿತೆಂದು ತಿಳಿದು ಅನಸೂಯೆ ಸುಮ್ಮನಾದಳು. ಇನ್ನು ಅಲ್ಲಿರಲು ಮನಸ್ಸಿಲ್ಲದೆ ರಭಸದಿಂದ ತನ್ನ ಕೋಣೆಗೆ ಹೋಗಿ ಧಢಾರೆಂದು ಬಾಗಿಲು ಹಾಕಿಕೊಂಡು ಬಿಟ್ಟಳು.

ಐದು ನಿಮಿಷಗಳ ನಂತರ ಮತ್ತೆ ಅನಸೂಯೆ ಮಾಳಿಗೆಯ ಮೇಲಿನ ಇವಳ ಕೋಣೆಗೆ ಬಂದು ಬಾಗಿಲು ತಟ್ಟುತ್ತ "ಕುಸುಮಾ, ಸತ್ಯನಾರಾಯಣರಾಯರು ಬಂದಾರವ್ಮಾ. ಏನು ಹೇಳಿ ಕಳಿಸಲಿ?" ಎಂದು ಕೇಳಿದಳು.

"ನನಗೆ ನಾಳಿನ ವರೆಗೆ ಅವಧಿ ಇದೆಯೆಂದು ಹೇಳಿ ಕಳಿಸಿಬಿಡಮ್ಮಾ" ಎಂದು ಹೇಳಿ ಕಳಿಸಿಬಿಟ್ಟಳು. ಹಾಕಿದ ಬಾಗಿಲು ತೆರೆಯಲೇ ಇಲ್ಲ.

ಅನಸೂಯಳು ಕೆಳಗೆ ಬಂದವಳೇ ರಾಯನನ್ನು ಕೂಡೆಂದು ಹೇಳಿ ವಿವರವಾಗಿ ಕುಸುಮ—ಪ್ರಭಾಕರರ ಪ್ರೇಮ ವ್ಯವಹಾರದ ಬಗ್ಗೆ ಹೇಳಿದಳು.

ಸತ್ಯನಾರಾಯಣ ರಾಯನು ನಿಸ್ಪ್ರಹತೆಯಿಂದ "ನನಗೆ ಮೊದಲೇ ತಿಳಿದಿತ್ತು ಹೀಗಾಗ್ತದೇ ಅಂತ. ಈ ಅನುಮಾನ ಮೊದಲಿನಿಂದಲೇ ನನ್ನ ಗಮನಕ್ಕೆ ಬಂದಿತ್ತು. ಈ ವಯಸ್ಸಿನಲ್ಲಿ ಅವಳ ಮೇಲೆ ನನಗೆ ವ್ಯಾಮೋಹವುಂಟಾಗಿದ್ದುದು ನನ್ನ ಪ್ರಾರಬ್ಧ. ಅವಳ ತಪ್ಪೇನಿದೆ ಇದ ರಲ್ಲಿ?" ಎಂದು ಮರುಗಿದ ತಾತ್ಕಾಲಿಕ ಆತ್ಮ ವಿಕಾಸವಾದಂತೆ.

"ಯಾಕಷ್ಟು ನಿಮಗೆ ಅಧೈರ್ಯರ್ಯಾಂತೀನಿ? ಆ ಪ್ರಭಾಕರನು ಇವಳನ್ನು ನಡುನೀರಿನ್ಯಾಗೆ ಕೈಬಿಡೋನೆ. ಇವಳ್ಯಾರೋ, ಇವಳಪ್ಪ ಅಮ್ಮ ಯಾರೋ ಅವನಿಗೊತ್ತಿಲ್ಲ. ಅವನ್ಯಾರೋ ಇವಳಿಗಿನ್ನೂ ತಿಳಿ ದಿಲ್ಲ. ಬರೇ ಪ್ರೀತಿ ಅಂತೆ; ಹೃದಯಗಳೊಂದಾದುವಂತೆ. ಇದು ಅಮರವಾಗಿ ಉಳಿಯುವದಂತೆ. ಏನಬ್ಬ ಆ ಮಾತುಗಳು ಅರ್ಥವೇ ಆಗೋದಿಲ್ಲ. ಇನ್ನೂ ಮದುವೆಯಾಗ್ತೀನೀಂತ ಖಂಡಿತ ಮಾತು ಕೊಟ್ಟಿ ಲ್ಲಾಂತ ನನಗನ್ನಿಸ್ತದ. ಇವರಿಬ್ಬರನ್ನ ಅಗಲಿಸಿ ಬಿಟ್ಟರೆ ಆಗ ತಂಟೀನೆ ತಪ್ತದೆ. ನಿಮ್ಮ ರೊಟ್ಟಿ ತುಪ್ಪದಾಗೆ ಬಿತ್ತಂತ ತಿಳೀರಿ. ಹ್ಯಾಗಾದರೂ ಮಾಡಿ ಅವ ಈ ಊರು ಬಿಡೋ ಹಾಗ ಮಾಡ್ರಿ ಮತ್ತ. ನೋಡೋಣ ನಿಮ್ಮ ಸಾಹಸಾನ" ಎಂದು ಗೆಲುವಿನ ಸೋಗಿನಿಂದ ಹೇಳಿ ಅವನನ್ನು ಹುರುಪು ಗೊಳಿಸಿದಳು.

"ಈ ವ್ಯವಹಾರ ಎಷ್ಟು ದಿನದಿಂದ ನಡೀತಿದೆ ಅಂಬೋದನ್ನು ತಿಳಿ ಕೊಂಡೀಯೇನು?"

"ಅಯ್ಯೋ ಎಲ್ಲೀದು? ಹೋದ ವಾರ ತಾನೆ? ನಾಟಕಾದಾಗ ನೋಡಿದ. ನಾಟಕ ನೋಡಿ ಮೋಸ ಹೋಗೋ ಹುಚ್ಚೀಂತ ತಿಳಿ ದಿದ್ದಿಲ್ಲ. ಅವತ್ತೇ ಹೇಳಿದ್ದು ನಾ ಕೇಳಿನಿ, 'ನನಗ್ಯಾರೂ ಸ್ನೇಹಿತ ರಿಲ್ಲಾಂತ'. ಮತ್ತೆ ಬಂದ್ರೆಲ್ಲಿ ಈಗ ಮಿತ್ರರು? ಭಲೋ ಪ್ರಸಂಗ. ನಿಮಗ್ಯಾಕೆ ಇಷ್ಟು ಅಧೈರ್ಯರ್ಯಾಂತೀನಿ? ಅಲ್ಲಾಂದ್ರೆ ನಿಮ್ಮನ್ನು ಮದುವೆಯಾಗ್ತೀನಿಂತ ಸ್ವಲ್ಪ ಮಟ್ಟಿಗೆ ಒಪ್ಪಿಕೊಂಡಿದ್ದಳು".

"ಅದೇನೆ ಇರಲಿ. ಕುಸುಮಳನ್ನು ನಾನು ಬಲ್ಲೆ. ಇದಕ್ಕೆ ಮೊದಲೇ ಅವರ ಪರಿಚಯವಿರಬೇಕು.

"ಅದೇನೋ ನಂಗೊತ್ತಿಲ್ಲಾಂದ್ರೆ. ಇವಳಿಗೆ ಈ ಹುಚ್ಚು ಹಿಡಿ

ದದ್ದು ಇದೇ ಮೊದಲು. ಇದಕ್ಕೇನಾದರೂ ಬೇಗ ಉಪಾಯ ಹುಡಿಕ್ರಿ. ಅಂದ್ರೇ........''

"ಆ....ಆ....ನಾಟಕ ಕಂಪನೀಂದಾನೇ ತೆಗೆದು ಹಾಕ್ಬಿಡತ್ತೇನೆ. ಕುಸುಮ ನನ್ನನ್ನು ಮದುವೆಯಾದರೆ ಆಗಲಿ, ಇಲ್ಲದಿದ್ದರೆ ಬಿಡಲಿ. ಕುಸುಮಳನ್ನು ಇವನ ಮೋಸದ ಜಾಲದಿಂದ ಮೊದಲು ತಪ್ಪಿಸ್ತೇನೆ. ಆ ಮೇಲೆ ನೋಡೋಣ."

"ಮೊದಲು ಆ ಕೆಲಸ ಮಾಡ್ರಿ'' ಎಂದು ಹೇಳಿ ಅನಸೂಯಳು ರಾಯರನ್ನು ಹೊರಗೆ ಕಳಿಸಿ ಬಾಗಿಲು ಮುಚ್ಚಿಕೊಂಡು ಯೋಚಿಸುತ್ತಾ ಸ್ವಲ್ಪ ಹೊತ್ತು ಕುಳಿತಳು.

"ರಾಯರು ಸ್ಥಿತಿವಂತರು. ಇವರಿಗೆ ಕುಸುಮಳನ್ನು ಗಂಟು ಹಾಕಿದರೆ, ಅವನ ಆಸ್ತಿಯಲ್ಲಿ ಹೆಚ್ಚು ನನ್ನ ಪಾಲಾಗಬಹುದು. ರಾಯರ ಮಕ್ಕಳಿಗೆ ಸ್ವಲ್ಪ ಆಸ್ತಿ ಬರೆಯಿಸಿಟ್ಟರಾಯಿತು. ನನಗೂ ವಯಸ್ಸಾಯ್ತು. ಆದಾಯ ಕಡಿಮೆ. ಸಂಪಾದನೆಗೆಂದು ಸಾಕಿದ ಹೆಣ್ಣು ಮಗು ಸಾವಿನ ಉಡಿಯಲ್ಲಿ ಬಿದ್ದುಹೋಯಿತು. ಅನಾಯಾಸವಾಗಿ ಬಂದೊದಗಿದ ಈ ಲಕ್ಷ್ಮಿಯ ಆಗಮನ ದೂರ ಮಾಡಿಕೊಳ್ಳುವುದೇ? ವ್ಯವಹಾರ ಕುಶಲಳಾದ ನನಗೆ ಈಗದು ಸಾಧಿಸದೇ ಹೋದರೆ ನನ್ನ ವೃತ್ತಿಗೆ ಕಳಂಕವಲ್ಲವೆ? ವೃತ್ತಿ ಹಾಳಾಗಲಿ, ಮುಂದೆ ಸುಖವಾಗಿ ಜೀವಿಸುವ ಬಗೆ? ಗಳಿಸಿದ್ದ ಹಣವೆಷ್ಟು ದಿನವಿರುವುದು? ಹಾಳು ದುಷ್ಕಾಲ.......ಆದರೆ ಕುಸುಮಳ ಭಾವೀ ಜೀವನದ ಸಮಸ್ಯೆ? ಅವಳು ನನ್ನ ತಂಗಿಯ ಮಗಳಲ್ಲವೆ? ಎಲ್ಲೀ ತಂಗಿ? ಅಂದು ನಮ್ಮ ಕುಲ ವೃತ್ತಿಯನ್ನು ತೊರೆದು ಶ್ರೀಧರರಾಯನನ್ನು ಮದುವೆಯಾಗಿ ನಮ್ಮ ಮನೆತನಕ್ಕೆಷ್ಟು ಹಾನಿಯನ್ನುಂಟುಮಾಡಿದಳು? ಮನೆಯವರನ್ನು ನಡು ನೀರಿನಲ್ಲಿ ಕೈಬಿಟ್ಟು ರಾಯನನ್ನು ಸೇರಿ ಏನು ಸುರಿದುಕೊಂಡಳು? ಕುಸುಮಳನ್ನು ಹಡೆದು ಪ್ರಾಣ ಬಿಟ್ಟಳು. ಸೂಳೆಯ ಜಾತಿಯವಳು ಮದುವೆಯಾದರೆ ಜಾತಿಯ ಕಲ್ಮಷ ಹೋಗುವುದೆ? ಸೂಳೆಯ ಮಗಳಿಗೆ ಮದುವೆಯಂತೆ!" ಎಂದು ತನ್ನನ್ನಕ್ಕೆ ತಾನೆ ನೆನೆದು ಊಟದ ಹೊತ್ತಾದುದರಿಂದ ಒಳಗೆ ಹೋದಳು.

೧೬

ಸತ್ಯನಾರಾಯಣರಾಯರಿಗೆ ಮನಸ್ಸು ನೆಮ್ಮದಿಯಾಗಿರಲಿಲ್ಲ. ಮನೆಯಲ್ಲಿರಲು ಕಾಲು ನಿಲ್ಲಲಿಲ್ಲ. ಕುಟುಂಬರಾಯನನ್ನು ಕಂಡು ಅಂದು ಸಾಯಂಕಾಲವೇ ಪ್ರಭಾಕರನನ್ನು ಕಂಪೆನಿಯಿಂದ ಹೊರದೂಡ ಬೇಕೆಂಬುದರ ಬಗ್ಗೆ ಮಾತು ಬೆಳೆಯಿಸಿ, ಅವನನ್ನು ತೆಗೆದು ಹಾಕಲೇ ಬೇಕೆಂದು ಹಠ ಹಿಡಿದ.

"ಅಲ್ಲಾ, ನಾಡದ್ದು ನಾಟಕ ಆದೆ, ಅಂದ್ರೆ, ಇವತ್ತು ಅವನನ್ನು ತೆಗೆದು ಹಾಕಿದರೆ ಮುಂದೇನು ಗತಿ? ಅಂಥಾ ಪ್ರಮಾದವೇನು ಬಂದಿದೆ ಈಗ ಹೇಳು? ಬೇಕಾದಷ್ಟು ಬೇರೇ ಕೆಲಸ ಬಿದ್ದಿದೆ. ಅದನ್ನು ಯೋಚಿಸೋದು ಬಿಟ್ಟು ಇದರ ಬಗ್ಗೆ ಇಷ್ಟೇಕೆ ಹಠ ನಿಂದು?"

ಅಲ್ಲಪ್ಪ, ಇಲ್ಲಿಯ ವರೆಗೂ ನಮ್ಮ ಕಂಪನಿಯ ವಿಷಯದಲ್ಲಿ ನಾನು ತಲೆಹಾಕಲೇ ಇಲ್ಲ. ನಿನ್ನ ಮಾತಿನಂತೆ ನಡೆದುಕೊಂಡೀನಿ. ಇದೊಂದು ಮಾತ್ರ ದಯವಿಟ್ಟು ನಡೆಯಿಸಿಕೊಡು. ಕಾರಣಗಳನ್ನು ಕೇಳಬೇಡ. ನಿನ್ನಂಥ ದೊಡ್ಡ ಮನುಷ್ಯ ಕೇಳತಕ್ಕವುಗಳಲ್ಲ ಆ ವಿಷಯಗಳು" ಎಂದು ಸತ್ಯನಾರಾಯಣರಾಯ ಹೇಳಿದ.

"ನಿನ್ನಿಷ್ಟ. ನಾನಿನ್ನೇನು ಮಾಡಲಿ" ಎಂದು ತನ್ನ ಸಮ್ಮತಿ ಸೂಚಿಸಿದ ಕುಟುಂಬರಾಯ.

ಅಲ್ಲಿಂದ ನೇರವಾಗಿ ಸತ್ಯನಾರಾಯಣ ರಾಯನು ಹರುಷದಿಂದ ಗೆದ್ದೆತ್ತಿನಂತೆ ಅನಸೂಯಳ ಮನೆಗೆ ಬಂದ. ಅದೇ ಸಮಯಕ್ಕೆ ಮುಂದಿನ ಪಡಸಾಲೆಯಲ್ಲಿ ಕುಸುಮಳಿದ್ದುದರಿಂದ ರಾಯರನ್ನು ಮಾತನಾಡಿಸಲೇ ಬೇಕಾಯಿತು. ರಾಯರಿಗೆ ಒಂದೇ ಒಂದು ವಾರದಲ್ಲಿ ಇಲ್ಲದ ಮುದಿ ಕಳೆ ಬಂದಂತೆ ಕಂಡುಬಂತು ಕುಸುಮಳ ಕಣ್ಣಿಗೆ. ಕಂಡು ಬಂದ ಈ ಬಗೆಯ ಬದಲಾವಣೆಗೆ ನಿಜವಾಗಿ ವ್ಯಸನಕ್ಕೀಡಾದ ರಾಯನ ಮನಸ್ಸೇ ಕಾರಣವೋ ಅಥವಾ ಕುಸುಮಳ ಮನಸ್ಸು ಕಾರಣವೋ ತಿಳಿಯಲಿಲ್ಲ. ಅವನು ಬಹಳೇ ಮುದುಕನಂತೆ ಕುಸುಮಳ ಕಣ್ಣಿಗೆ ಮಾತ್ರ ಕಂಡುಬಂದುದು ನಿಜ.

"ಅಲ್ಲಾ, ನೀನಿಟ್ಟ ಅವಧಿ ನಾಳೆಗೆ ಮುಗಿಯುವುದೆಂದು ನನಗೆ ತಿಳಿದಿದ್ದರೂ ನನಗಿರುವ ಆತುರದಿಂದ ಕೇಳುತ್ತೇನೆ ಹೇಳು, ಕುಸುಮಾ. ಮದುವೆಯ ವಿಷಯ ನಿನ್ನ ನಿರ್ಧಾರವೇನು? ನನಗೀಗಾಗಲೇ ತಿಳಿಯ ಹತ್ತಿದೆ ನಿನ್ನ ನಿರ್ಧಾರವೇನೆಂಬುದು; ಆದರೆ ನಿನ್ನ ಮುಖದಿಂದಲೇ ಬಂದುಬಿಡಲಿ ಆ ಮಾತುಗಳು. ಆಗ ನನಗೆ ಸ್ವಲ್ಪ ಸಮಾಧಾನ'' ಎಂದು ಕೇಳಿಕೊಂಡ ಸತ್ಯನಾರಾಯಣರಾಯ.

ಆತನ ಅಸಹಾಯ ಸ್ಥಿತಿಯನ್ನು ನೋಡಿ ಕುಸುಮಳ ಮನಸ್ಸು ಕರಗಿತು. ಇಂಥಾ ಇಳಿ ವಯಸ್ಸಾದರೂ ರಾಯನಿಗೆ ತನ್ನನ್ನು ಮದುವೆಯಾಗಬೇಕೆಂಬ ಚಪಲ ಒಂದು ಮಹಾ ದೋಷವೆಂದು ಕುಸುಮಳು ಭಾವಿಸಲಿಲ್ಲ. ಆವನ ಮನೋದೌರ್ಬಲ್ಯವೇ ಇದಕ್ಕೆ ಕಾರಣವೆಂದು ನೆನೆದು ಸ್ವಲ್ಪ ಹೊತ್ತು ಸುಮ್ಮನಿದ್ದು "ಕ್ಷಮಿಸಬೇಕು; ನಿಮ್ಮನ್ನು ನಿರಾಶೆಗೊಳಿಸಲು ನನಗೆ ವ್ಯಥೆಯೆನಿಸುತ್ತದೆ. ನಿಮ್ಮನ್ನು ನಾನು ಮದುವೆಯಾಗಲಾರೆ. ನನ್ನ ಮನಸ್ಸು ಇನ್ನೊಬ್ಬರನ್ನು ಪ್ರೇಮಿಸಿದೆ· ಅವರೂ ನನ್ನನ್ನು ಪ್ರೀತಿಸುತ್ತಿರುವರು. ವಯಸ್ಸಿನಲ್ಲಿ ಸರಿಯಾದ ಜೋಡು. ನೀವೇ ಯೋಚಿಸಬೇಕು. ನೀವೆಂದರೆ ನನಗೆ ಬಹಳ ಅಭಿಮಾನ· ನಿಮ್ಮ ಪ್ರೇಮವನ್ನು ನಿರಾಕರಿಸಿದೆನೆಂದು ಕೋಪಿಸಿಕೊಳ್ಳಬೇಡಿ" ಎಂದು ಸಹಜ ಸೌಜನ್ಯದಿಂದ ಹೇಳಿದಳು.

"ಆದರೆ ಮೊದಲೇ ಈ ನಿರ್ಧಾರವನ್ನೇಕೆ ಸೂಚಿಸಲಿಲ್ಲ?"

"ನಿಮ್ಮನ್ನು ಸುಮ್ಮನೆ ಇಷ್ಟು ದಿನ ಗೊಂದಲದಲ್ಲಿ ಕೆಡವಿ ಮನಸ್ಸಿಗೆ ನೋವನ್ನುಂಟು ಮಾಡಿದುದಕ್ಕೆ ಕ್ಷಮೆ ಬೇಡುತ್ತೇನೆ. ಇತ್ತೀಚೆಗೆ ಮನಸ್ಸೇ ನನ್ನ ಸ್ವಾಧೀನದಲ್ಲಿಲ್ಲ. ಅಭಿಮಾನವನ್ನು ತೊರೆದು ಮನೆ ಮಾರಿಲ್ಲದೆ ಅಲೆಯುತ್ತಿದ್ದೇನೆ. ನಿಮ್ಮ ಸಲಹೆ ಸಕ್ರಮವಲ್ಲವೆಂದು ಹೇಳುವ ಧೈರ್ಯವಿಲ್ಲ" ಎಂದು ಹೇಳಿದ ಮಾತಿಗೆ ರಾಯನು ಎರಡು ನಿಮಿಷಗಳ ವರೆಗೆ ಸುಮ್ಮನಿದ್ದು, ಕುರ್ಚಿಯಿಂದ ಮೇಲಕ್ಕೇಳುತ್ತ "ನಿನಗೆ ನಿಷ್ಕಾರಣವಾಗಿ ಕಷ್ಟಕೊಟ್ಟೆ. ಮತ್ತೆ ಈ ಮಾತನ್ನು ನೆನಪು ಮಾಡಿಕೊಡುವುದಿಲ್ಲ.. ಮುಂದೆ ಯಾವ ಕಾರಣದಿಂದಲಾದರೂ ನಿನ್ನ ನಿರ್ಧಾರ ಬದಲಾಯಿಸುವ ಪ್ರಸಂಗ ಬಂದರೆ ನನ್ನ ನೆನಪು ಮಾತ್ರ

ಇರಲಿ. ನನಗಿಂತಲೂ ಒಳ್ಳೆಯ ಗಂಡ ನಿನಗೆ ದೊರೆಯದೇ ಹೋದರೆ ಎಂದಿಗಾದರೂ ನಿನ್ನನ್ನು ಮದುವೆಯಾಗಲು ನನಗೆ ಸಮ್ಮತಿಯಿದೆ. ಮದುವೆಯಾಗಿ ನೀನು ಸುಖಿಯಾಗಿರುವೆಯೆಂದು ತಿಳಿದು ಬರುವ ವರೆವಿಗೂ ನಾನೇನು ಮತ್ತೆ ಮದುವೆ ಮಾಡಿಕೊಳ್ಳೋದಿಲ್ಲ. ನಿನ್ನ ನೋಡಿದ ಮೇಲೆ ತಾನೇ ನನಗೆ ಮದುವೆಯಾಗಬೇಕೆಂಬ ಅಭಿಲಾಷೆ ಉಂಟಾಯಿತು. ನಾನಿನ್ನು ಬರಲೆ" ಎಂದು ಹೇಳಿ ರಾಯನು ಹೊರಟು ಹೋದನು.

ಮಾರನೆಯ ದಿನ ಕುಸುಮಳು ಎಚ್ಚರವಾದಾಗ ಅವಳ ಹೃದಯವು ಹಗುರವಾಗಿದ್ದಿತು. ಹೊಸ ಚೈತನ್ಯವು ಅವಳಲ್ಲಿ ತಲೆದೋರಿತ್ತು. ಉಕ್ಕಿ ಬರುವ ಸಂತೋಷವು ಅವಳಲ್ಲಿ ಹೊರ ಚಿಮ್ಮುತ್ತಿತ್ತು. ರಾಯನ ಹಿಡಿತದಿಂದ ದೂರಾದೆನಲ್ಲವೆಂಬ ಭಾವನೆ ಅವಳ ಜೀವನಕ್ಕೆ ಹೆಚ್ಚು ಸುಖವನ್ನು ತಂದು ಕೊಟ್ಟಿದ್ದಿತು. ಇಂತಹ ಆನಂದಮಯ ಬೆಳಗನ್ನವಳು ಹಿಂದೆಂದೂ ಕಂಡಿದ್ದಿಲ್ಲ. ಈ ಅನುಭವ ಅವಳಿಗೆ ತೀರ ಹೊಸ ರೀತಿಯ ದಾಗಿದ್ದಿತಲ್ಲದೆ ಹೆಚ್ಚಿನ ಸುಖವನ್ನು ತಂದು ಕೊಟ್ಟದ್ದಿತು. ಮುಖ ತೊಳೆದು ಕಾಫಿ ಕುಡಿದು ಹರುಷದಿಂದ ಹೆಚ್ಚಿನ ಸ್ಥಾಯಿಯಲ್ಲಿ ಹಾಡುತ್ತ ತನ್ನ ಕೋಣೆಯಲ್ಲಿ ಕುಳಿತಳು.

ಅದೇ ಸಮಯಕ್ಕೆ ಸರಿಯಾಗಿ ಲಾಡ್ಜಿನ ಅಂಗಳದಲ್ಲಿ ಏನನ್ನೋ ಯೋಚಿಸುತ್ತ ನಿಂತಿದ್ದ ಪ್ರಭಾಕರನಿಗೆ ಈ ಹಾಡು ಕೇಳಿಸಿತು. ಮೊದಲು ಯಾರೋ ಇರಬಹುದೆಂದು ನೆನೆದು ಸುಮ್ಮನಿದ್ದನು. ಆದರೆ ಹಾಡು ಪವರದು ಹೆಣ್ಣಿನ ಸ್ವರವಾಗಿದ್ದುದರಿಂದಲೂ ಬಹಳ ಸುಶ್ರಾವ್ಯವಾಗಿದ್ದು ದರಿಂದಲೂ ಅವನ ಮನಸ್ಸತ್ತ ಎಳೆಯಲ್ಪಟ್ಟಿತು.

"ಇಂಪಾದ ಸ್ವರ. ಅರ್ಥದಲ್ಲಿಯೂ ಸ್ಪಷ್ಟತೆ ಇದೆ. ನಮ್ಮ ಸ್ಟೇಜಿಗೆ ಇಷ್ಟು ಮಾತ್ರ ಸಾಕು" ಎಂದು ಮನಸ್ಸಿನಲ್ಲೇ ಗೊಣಗುಟ್ಟುತ್ತ, ಅಲ್ಲಿದ್ದ ಆಳುಮಗನನ್ನು ಕರೆದು ಹಾಡು ಕೇಳಿಬಂದ ಮನೆಯ ಕಡೆ ಬೆರಳು ಮಾಡಿ "ಆ ಮನೆ ಯಾರದು?" ಎಂದು ಕೇಳಿದ.

"ಯಾರೋ, ಸೂಳೆ ಜಾತಿಯವರದು."

"ಖಂಡಿತ. ನಿನಗವರಾರೆಂಬುವುದು ತಿಳಿದಿದೆಯೆ?"

"ಸ್ವಾಮಿ, ಆ ಮನೆಯವಳು ನಮ್ಮ ಛೇರ್ಮನ್ ಸತ್ಯನಾರಾಯಣ ರಾಯರ ಸೂಳೆ" ಎಂದು ಕಿವಿಯಲ್ಲಿ ಪಿಸುಗುಟ್ಟಿದನು.

"ಆ ಹಾಡು ಯಾರದು?"

"ಆಕೆಯದಲ್ಲ—"

ಪ್ರಭಾಕರನಿಗೆ ಹೆಚ್ಚು ತಿಳಿಯ ಬೇಕಾಗಿದ್ದಿಲ್ಲ. ಲಾಡ್ಜಿಗೆ ಜನ ರಿನ್ನೂ ಬರಲು ವೇಳೆಯಿತ್ತು. ಆದುದರಿಂದ ಆ ಮನೆಯಲ್ಲಿ ಹೋಗಿ ವಿಚಾರಿಸಿದರೆ ತಪ್ಪೇನೆಂದು ನೆನೆದ. ಆ ಹೆಂಗುಸನ್ನು ಕಂಪನಿಯಲ್ಲಿ ಸೇರಿಸಬಹುದು. ಜಾತಿಯಲ್ಲಿಯೂ ಸೂಳೆ. ನಾಟಕದಲ್ಲಿ ಪಾರ್ಟು ಮಾಡಲು ಒಪ್ಪಬಹುದು. ಈ ರೀತಿ ಮನಸ್ಸಿನಲ್ಲಿಯೇ ಯೋಚಿಸಿ ಆ ಮನೆಯನ್ನು ಸಮೀಪಿಸಿ, ಒಳಗೆ ಹೋಗುವುದಕ್ಕಿಂತ ಮುಂಚೆಯೇ ದಾರಿ ಯಲ್ಲಿ ಹೋಗುವವನೊಬ್ಬನನ್ನು ತಡೆದು "ಈ ಮನೆ ಯಾರದು?" ಎಂದು ಕೇಳಿದ.

"ಕಳಾವಂತರದು" ಎಂದು ಅವನು ಹೇಳಿದ ಮಾತಿನಿಂದ ಧೈರ್ಯ ತಂದುಕೊಂಡು ಆ ಮನೆಯೊಳಗೆ ಪ್ರವೇಶಿಸಿದ. ಇವನು ಒಳ ಗಿನ ಪಡಶಾಲೆಯಲ್ಲಿ ಕಾಲಿಡುವುದಕ್ಕೂ, ಕುಸುಮಳು ಮಾಳಿಗೆಯಿಂದ ಕೆಳಗಿಳಿದು ಎದುರಾಗಿ ಬರುವುದಕ್ಕೂ ಸರಿ ಹೋಯಿತು.

"ಕುಸುಮಾ!" ಎಂದು ಆಶ್ಚರ್ಯದಿಂದ ನೋಡಿದ. ಆದರೆ ಅವನ ನೋಟದಲ್ಲಿ ಹಿಂದಿನ ಸಂತೋಷವಿರಲಿಲ್ಲವಾದ್ದರಿಂದ ಕುಸುಮಳು "ಅಹುದು, ಇದು ನಮ್ಮ ದೊಡ್ಡಮ್ಮನ ಮನೆ" ಎಂದು ಹೇಳಿದಳು. ಪ್ರಭಾಕರನು ಯಾವನೋ ಅಪರಿಚಿತನಂತೆ ವರ್ತಿಸುತ್ತಿರುವುದನ್ನು ಕಂಡು ಕುಸುಮಳ ಹೃದಯ ನಿರಾಶೆಯಿಂದ ಜರ್ಜರಿತಗೊಂಡಿತು.

"ಜನರು ಇದು ವೇಶ್ಯೆಯರ ಮನೆಯೆಂದು ಹೇಳಿದರಲ್ಲವೆ?" ಎಂದು ಕೇಳುವಾಗ ಪ್ರಭಾಕರನ ಮುಖದಲ್ಲಿ ತನ್ನನ್ನು ಯಾರೋ ವಂಚಿ ಸಿದರೆಂಬ ಸಂಶಯದ ನೋಟವಿತ್ತು.

"ಅಹುದು. ನಮ್ಮ ದೊಡ್ಡಮ್ಮ ಕಳಾವಂತಳೇ. ಸೂಳೆಯ ವೃತ್ತಿಯನ್ನು ಇನ್ನೂ ಮಾಡುತ್ತಲಿರುವಳು". ಎಂದು ಯಾವ ಸಂಶ ಯವಿಲ್ಲದೆ, ನಿರ್ಭೀತಿಯಿಂದ ಹೇಳಿದ ಮಾತಿನ್ನೂ ಅರ್ಥವಾಗದೆ ಹಾಗೆ

ಆಶ್ಚರ್ಯದಿಂದ ನೋಡುತ್ತ ನಿಂತಿದ್ದ ಪ್ರಭಾಕರನಿಗೆ ತನ್ನ ಹುಟ್ಟಿನ ರಹಸ್ಯ ತಿಳಿದಿರಲಿಕ್ಕಿಲ್ಲವೆಂದು ತರ್ಕಿಸಿ, ಪ್ರಭಾಕರನಲ್ಲಿ ಉಂಟಾಗುತ್ತಿದ್ದ ಬದಲಾವಣೆಗಳೇನೆಂಬುದನ್ನು ತೆರೆದ ಕಣ್ಣುಗಳಿಂದ ನೋಡುತ್ತ ನಿಂತಿದ್ದಳು ಕುಸುಮಳು.

ಮುಂದೇನು ಎಂಬ ಸಂದೇಹದ ನೋಟದಿಂದ ಪ್ರಭಾಕರನು "ನೀನು—ಮತ್ತೆ-- ನೀನು." ಎಂದು ಹೇಳಿ ಸುಮ್ಮನಾದ.

"ನಾನೂ ಸೂಳೆಯ ಮನೆತನದವಳೇ. ನನ್ನ ತಂದೆ ಬ್ರಾಹ್ಮಣ ತಾಯಿ ಸೂಳೆಯ ಮನೆತನಕ್ಕೆ ಸೇರಿದವಳು. ಇಬ್ಬರೂ ಮದುವೆಯಾಗಿ ಜೀವಿಸಿದರು. ಅವರ ಮಗಳು ನಾನು. ನನ್ನದಾವ ಕುಲವೋ ನೀವೇ ನಿರ್ಧರಿಸಿರಿ'' ಎಂದಳು ಕುಸುಮ.

ಯಾವ ಪ್ರಮಾದದಿಂದಲೋ ತಾನು ಮಹಾ ದೊಡ್ಡ ತಪ್ಪು ಮಾಡಿದವನಂತೆ ನೆನೆದು "ಈ ವಿಷಯ ಮೊದಲೇ ಏತಕ್ಕೆ ತಿಳಿಸಲಿಲ್ಲ?" ಎಂದು ಕೇಳಿದ.

"ಆದರಲ್ಲೇನು ಪ್ರಮಾದ? ಈಗಲಾದರೂ ತಿಳಿಯಿತಲ್ಲ'' ಎಂದು ಹೇಳುವಾಗ ಮಾತಿನಲ್ಲಿ ದಿಟ್ಟತನವಿದ್ದರೂ ಅವಳ ಮನಸ್ಸು ನಿರಾಶೆಯ ಯೋಚನೆಗೊಳಗಾಗಿತ್ತು.

ಪ್ರಭಾಕರನು ಸುಮ್ಮನೇ ನಿಂತು ಬಿಟ್ಟ. ಕುಸುಮಳ ಮುಖವನ್ನು ನೋಡುವಷ್ಟು ಧೈರ್ಯವಿರಲಿಲ್ಲ. ಕುಸುಮಳು ಸಮಾಧಾನದ ಸೋಗಿನಿಂದ ''ನಿಮ್ಮ ಮನಸ್ಸಿನ ವೇದನೆ ನನಗೀಗ ಅರ್ಥವಾಯಿತು. ನೀವಿನ್ನಿಲ್ಲಿಂದ ಹೋಗಬಹುದು. ಮತ್ತೆ ಮುಂದೆ ನನ್ನನ್ನು ಕಾಣುವ ಪ್ರಯತ್ನವನ್ನೂ ಮಾಡಬೇಡಿ'' ಎಂದು ಹೇಳಿದಳು.

ಪ್ರಭಾಕರನು ತಾನೇನು ಮಾಡುತ್ತಿರುವೆನೆಂಬುದನ್ನು ತಿಳಿಯುವಂತಹ ಪರಿಸ್ಥಿತಿಯಲ್ಲಿರಲಿಲ್ಲ. ಹುಚ್ಚನಂತೆ ಅದೇ ಗುಂಗಿನಲ್ಲಿ ಹೊರಗೆ ಬಂದು ಸ್ವಲ್ಪ ದೂರ ಹಾದಿ ನಡೆದ ನಂತರ ತಾನೆಲ್ಲಿರುವೆನೆಂಬುವುದು ತಿಳಿಯಿತು. ಕುಸುಮಳ ಕುಲವಾವುದೆಂಬ ಗೊಂದಲದಲ್ಲಿ ತಾನವರ ಮನೆಗೆ ಹೋದ ಉದ್ದೇಶವನ್ನೇ ಮರೆತು ಬಿಟ್ಟಿದ್ದ. ತಮ್ಮ ನಾಟಕ

ಸಂಸ್ಥೆಯಲ್ಲಿ ಸೇರಿಸಿಕೊಳ್ಳುವುದು ಸಂಸ್ಥೆಯ ಏಳಿಗೆಗೆ ಮುಖ್ಯವಾದು ದರಿಂದ ಆ ವಿಷಯ ಚರ್ಚಿಸದೇ ಬಂದುದಕ್ಕೆ ಕೆಡುಕೆನಿಸಿತು.

ಆದುದರಿಂದ ಮತ್ತೆ ಪ್ರಭಾಕರನು ಅನಸೂಯಳ ಮನೆಯೊಳಗೆ ಬಂದುದನ್ನು ಕುಸುಮಳು ನೋಡಿದಳು. ಅವನು ಹೊರಗೆ ಹೋದ ನಂತರ ದುಃಖದಿಂದ ಅವಳು ಕಣ್ಣೀರಿಟ್ಟಳು. ಆದರೆ ಇವನು ಮತ್ತೆ ಬಂದುದನ್ನು ನೋಡಿ ಹುಲಿಯಂತೆ ಕೋಪದಿಂದ ಅವನ ಕಡೆ ದಿಟ್ಟಿಸಿ ನೋಡಿದಳು.

"ಇಲ್ಲಿಗೆ ನಾನು ಬಂದ ಕೆಲಸವೇನೆಂಬುವುದನ್ನು ಹೇಳದೇ ಹೋದೆ —ನೀನು ನಮ್ಮ ನಾಟಕಗಳಲ್ಲಿ ವೇಷ ಹಾಕುವೆಯಾ ಎಂದು ತಿಳಿಯ ಬಯಸುತ್ತೇನೆ'' ಎಂಬ ಮಾತುಗಳು ಅವಳ ಕಿವಿಗೇ ಹಾಸ್ಯಾಸ್ಪದವಾಗಿ ತೋರಿದವು.

"ನಿಮ್ಮ ನಾಟಕದಲ್ಲಿ ವೇಷ ಹಾಕುವುದಂತಿರಲಿ. ನಿಮ್ಮ ಕಂಪ ನಿಯು ಇದ್ದ ಊರಿನಿಂದ ನೂರು ಮೈಲುಗಳ ದೂರವಿದ್ದರೂ ನನಗೆ ಸಮಾಧಾನವಾಗುವುದಿಲ್ಲ. ತಾವಿನ್ನು ದಯವಿಟ್ಟು ಹೊರಡಬಹುದು'' ಎಂದು ಹೇಳಿದಳು ನೊಂದ ಹೃದಯದಿಂದ. ತನ್ನ ಜೀವನ ರಹಸ್ಯ ವನ್ನು ಬೇಕೆಂದು ತಾನಾಗಿಯೇ ಗೋಪ್ಯವಾಗಿಟ್ಟಿನೆಂದು ಪ್ರಭಾಕರನು ದೂರಿದ ಮಾತುಗಳು, ಶೂಲದಂತೆ ಅವಳ ಹೃದಯವನ್ನು ಚುಚ್ಚಿ ಗಾಯ ಮಾಡಿದ್ದವು. ಆ ಗಾಯವಿನ್ನೂ ಮಾದಿರಲಿಲ್ಲ. ಬೇಗ ಮಾಯುವುದಂತೂ ಅಶಕ್ಯವೇ ಸರಿ.

ಪ್ರಭಾಕರನು ಹೊರಗೆ ಹೋದ ಮೇಲೆ ಅವಳ ಕೋಪ ಸ್ವಲ್ಪ ಕಡಮೆಯಾಯಿತು. ಆದರೆ ಪ್ರಭಾಕರನು ಅತಿ ನಿಧಾನವಾಗಿ ಹಾಕು ತ್ತಲಿದ್ದ ಹೆಜ್ಜೆ, ಆ ಸಮಯದಲ್ಲಿ ಕಂಡು ಬಂದ ಅವನ ಮಂದಗತಿ, ಅವನ ಮನಸ್ಸಿನಲ್ಲಿ ಆಗುತ್ತಿದ್ದ ಆಂದೋಲನವನ್ನು ವ್ಯಕ್ತಗೊಳಿಸಿತು. ದೂರ ಸರಿದು ಹೋಗುತ್ತಲಿದ್ದ ತನ್ನ ಪ್ರೀತಿಯ ಗೆಳೆಯನನ್ನು ಕರೆ ಯೆಂದು ಹೃದಯ ಹೇಳ ತೊಡಗಿತು. ಆದರೆ ಮನಸ್ಸು ಕನಿಕರಕ್ಕೆಡೆ ಗೊಡಲಿಲ್ಲ. ಪೆಟ್ಟು ತಿಂದಲ್ಲಿ ಮತ್ತು ದಯೆಗಾಗಿ ಹುಡುಕುವ ಸ್ವಭಾವ ಕುಸುಮಳದಾಗಿದ್ದಿಲ್ಲ.

ಕುಸುಮಳ ಮನಸ್ಸು ಮತ್ತೆ ಗೊಂದಲದಲ್ಲಿ ಬಿತ್ತು. ಮಾಳಿಗೆ ಯನ್ನೇರಿ ತನ್ನ ಕೋಣೆಗೆ ಹೋಗಿ ಯೋಚಿಸಿದಳು. ಎಲ್ಲವನ್ನೂ ವಿವರ ವಾಗಿ ತರ್ಕಿಸಿದಳು. ಸಾವಕಾಶವಾಗಿ ಯೋಚಿಸಿ, ನಿರ್ಧರಿಸಲು ನಿಶ್ಚ ಯಿಸಿದಳು. ಆದರೆ ಮನಸ್ಸು ಹಿಡಿತದಲ್ಲಿರಲಿಲ್ಲ. ನಂಬಿದವನು ಈ ರೀತಿ ಗಾಯಗೊಳಿಸಿದುದು, ತನ್ನನ್ನು ವಂಚಿಸಿದುದು ಅವಳಿಗೆ ವ್ಯಥೆ ಯನ್ನುಂಟು ಮಾಡಿತ್ತು.

ಮುಂದೇನು ಮಾಡಬೇಕೆಂಬುದನ್ನು ನಿಶ್ಚಯಿಸಲು ಮತ್ತೆ ಒಂದೆಡೆ ಕೂತು ಯೋಚಿಸಿದಳು. ಸ್ವಲ್ಪ ಸಮಯದ ನಂತರ ಎದ್ದು ಮಾಳಿ ಗೆಯ ಬಯಲಿನಲ್ಲಿ ಅಡ್ಡಾಡಿದಳು. ಥಟ್ಟನೆ ಕೆಳಗಿಳಿದು ಅನಸೂಯ ಳನ್ನು ಸಮೀಪಿಸಿ "ಇಲ್ಲಿ ನೋಡು. ನಾನು ಈಗಿಂದೀಗಲೇ ರಾಯರ ಮನೆಗೆ ಹೋಗುವವಳಿದ್ದೇನೆ. ಅವನನ್ನು ಕಂಡು ಮದುವೆ ಯಾಗುವೆ ನೆಂದು ನನ್ನ ನಿರ್ಧಾರವನ್ನು ಹೇಳಿ ಬಿಡುತ್ತೇನೆ. ನೀನೂ ನನ್ನ ಕೂಡೆ ಬರುತ್ತಿಯಾ?" ಎಂದು ಹೇಳಿದ ಕುಸುಮಳ ಮಾತು ನಿಜವೋ ಸುಳ್ಳೋ ಎಂದು ನಿಶ್ಚಯಿಸಲಾರದೇ ಅನಸೂಯಳು ಕುಸುಮಳನ್ನು ದಿಟ್ಟಿಸಿ ನೋಡುತ್ತ "ಹುಚ್ಚೀ, ನಾನೇತಕ್ಕೆ ಬರಬೇಕು ನಿನ್ನೊಂದಿಗೆ? ಪಾನಕದಲ್ಲಿ ನಿಂಬೇ ಬೀಜದ ಹಾಗೆ. ಹೋಗಿ ಬಾ ಮಗೂ" ಎಂದು ಸಮಾಧಾನ ಹೇಳಿದಳು.

ಅನಸೂಯಳಾಡಿದ 'ಪಾನಕದಲ್ಲಿ' ಎಂಬ ಶಬ್ದವು ಬಹಳ ಅಪಸ್ವರ ದಂತೆ ತೋರಿತು. ರಾಯರ ಹೆಂಡತಿ ಯಾಗುವುದು ಯಾರಿಗೆ ಪಾನಕ ದಷ್ಟು ಸವಿ? ರಾಯರಿಗಿರಬಹುದು. ಆದರೆ ನಿರಾಶಾ ಪ್ರಪಂಚದಲ್ಲಿ ಮುಳುಗಿ, ಬುಡವನ್ನೇ ಸೇರುತ್ತಿರುವ ಅವಳಿಗೆಲ್ಲಿಯ ಸುಖದ ಸವಿ? ಮುಂದೆ ಅವಳ ಜೀವನದಲ್ಲಿ ಸುಖದ ದಿನಗಳು ಬರುವ ಸಂಭವ ಉಂಟೆ? ಈಗೇತಕ್ಕೆ ಆ ಯೋಚನೆ? ಮುಂದಿನ ಕರ್ತವ್ಯವೇನು? ರಾಯರ ಮನೆ ಸೇರುವುದು ತಾನೆ?

ರಾಯರ ಮನೆಗೆ ಹೋಗಲು ಕುದುರೆ ಗಾಡಿಗಾಗಿ ಕಾಯುತ್ತ ಹೊಸ್ತಿಲಲ್ಲಿ ನಿಂತಾಗ ಅಕಸ್ಮಾತ್ತಾಗಿ ಕಾಂತರಾಯನು ನೆನಪಿಗೆ ಬಂದನು. ಪ್ರಭಾಕರನು ತನ್ನ ವೈರಿಯಾದರೆ, ಕಾಂತರಾಯನಿಗೂ

ಅದು ಅನ್ವಯಿಸಬೇಕೆ? ಅವರಿಬ್ಬರದೂ ಒಂದೇ ಹೃದಯವಲ್ಲವೆ? ಹೀಗೆಂದು ಅನೇಕ ಸಲ ಪ್ರಭಾಕರನು ಕಾಂತರಾಯನಲ್ಲಿ ತನಗಿರುವ ನಿಕಟ ಸಂಬಂಧವನ್ನು ತಿಳಿ ಹೇಳಿದ್ದ. 'ನಾನು ನಿನ್ನನ್ನು ಮದುವೆಯಾಗುವೆ'ನೆಂದು ಹೇಳಿದ ಪ್ರಭಾಕರನ ಅಂದಿನ ಆಶ್ವಾಸನವೆಲ್ಲಿ? ಇಂದು ಸಮಾಜಕ್ಕೆ ಹೆದರಿ ನಿರ್ಮಲವಾದ ಪ್ರೇಮದ ಕರೆಯನ್ನು ನಿರಾಕರಿಸಿ ಹೇಡಿಯಂತೆ ದೂರ ಸರಿದ ಪ್ರಭಾಕರನ ಅಂಜುಬುರುಕುತನವೆಲ್ಲಿ? ಕುಸುಮಳ ಕಣ್ಣಲ್ಲಿ ನೀರು! ಪ್ರಭಾಕರನ ತೀರ ಹೊಸ ರೀತಿಯ ಈ ವರ್ತನೆ ಆಶ್ಚರ್ಯಗೊಳಿಸಿತಲ್ಲದೆ, ಅವಳ ಹೃದಯವನ್ನು ಬಹಳ ಗಾಯಗೊಳಿಸಿದ್ದಿತು. ಹೆಣ್ಣನ್ನು ವಂಚಿಸಿದರೆ, ಹೇಳಲಾಗದ ದುಃಖವುಂಟಾಗುವುದು. ಗಂಡು ಕೇವಲ ಸ್ವಲ್ಪ ಸಮಯದಲ್ಲಿ ಆ ನೋವನ್ನು ಮರೆಯಬಹುದು. ಆದರೆ ಹೆಣ್ಣಿನ ಸ್ವಭಾವವು ಬೇರೆ ರೀತಿಯದು. ಇಂದು ಪ್ರಭಾಕರನಿಗೆ ಕಂಡು ಬಂದುದು ಮೂಸಿ ನೋಡದ, ನಿರ್ಮಲವಾದ ಈ ಸಂಪಿಗೆಯ ಹೂವಲ್ಲ. ಕೊಳಕಿನಲ್ಲಿ ಬೆಳೆದ ಕಮಲವು ನಿರ್ಮಲವೆಂದು ಅವನು ನೆನೆದರೂ, ಕೊಳಕಿನ ಕೂಪದಲ್ಲಿದ್ದುದು ಕೆಸರೆಂದು ಮಾತ್ರ ಅವನಿಗೆ ಕಂಡು ಬಂತು. ತಪ್ಪು ಯಾರದು? ಕುಸುಮಳು ಪ್ರಭಾಕರನನ್ನು ಕ್ಷಮಿಸಬೇಕೆ? ಇದರಲ್ಲಿ ಕಾಂತರಾಯನ ಮಧ್ಯಸ್ತಿಕೆಯನ್ನು ಬೇಡಬೇಕೆ? ಛೆ! ಇನ್ನೆಲ್ಲಿಯ ಅನುಸಂಧಾನ? ಬಕ್ಕತಲೆಯ ರಾಯನೇ ತನಗೆ ಗತಿ........ಇಷ್ಟೇಕೆ ಆವಸರ? ಸ್ವಲ್ಪ ತಡೆಯಬಹುದಲ್ಲವೆ? ಸಾಯಂಕಾಲ ಪ್ರಭಾಕರನು ಸಂತಾಪದಿಂದ ಬಂದು ಕ್ಷಮಾಪಣೆ ಬೇಡಬಹುದು. ಸಮಾಜವನ್ನೆದುರಿಸಲು ಸನ್ನಾಹಗಳುಬೇಕು. ಪ್ರಭಾಕರನು ಮೌನದಿಂದ ಹೋದನಲ್ಲವೆ? ನಿನ್ನನ್ನು ಮದುವೆ ಯಾಗುವುದಿಲ್ಲವೆಂತು ಹೇಳಲಿಲ್ಲವಲ್ಲ? ಪ್ರಭಾಕರನು ಸುಸಂಸ್ಕೃತನಲ್ಲವೆ? ಅವನು ತಾನು ನೆನೆದಷ್ಟು ನೀಚನೆ?........ಆದರೆ ತನಗೇಕೆ ಮೊದಲು ತಿಳಿಸಲಿಲ್ಲವೆಂದು ಪ್ರಭಾಕರನ ಮಾತುಗಳ ಅಭಿಪ್ರಾಯವೇನು? ತನ್ನ ನಡತೆಯಲ್ಲಿ ಸಂಶಯವೆ? ತಾನಿಷ್ಟು ದಿನ ಯಾರಿಗಾಗಿ ತಮ್ಮವರನ್ನೂ ತೊರೆದು ಬಂದಳೋ ಅವಳ ಬಗ್ಗೆ ಪ್ರಭಾಕರನು ಸಂಶಯಗೊಳ್ಳುವುದು ಎಲ್ಲಿಯ ನ್ಯಾಯ? ಅಂದು ಮೂಕನಂತೆ ಸುಮ್ಮನಿದ್ದುದಾದರೂ ಏಕೆ?....

....ಆಯಿತು, ಒಂದು ವೇಳೆ ಪ್ರಭಾಕರನು ತನ್ನನ್ನು ಮದುವೆಯಾಗ ಬಹುದು. ಸಮಾಜವನ್ನು, ಮನೆಯವರನ್ನು, ಎದುರಿಸಿ ಮದುವೆ ಯಾಗಲು ಮುಂದೆ ಬರಬಹುದು........ಈಗ ಮನಸ್ಸಿನಲ್ಲಿ ನೆಲೆಸಿರುವ ಇವನ ಅನುಮಾನವನ್ನು ಅಳಿಸುವ ಬಗೆ ಹೇಗೆ? ಯಾರಾದರೂ ಮಧ್ಯ ವರ್ತಿಯಾಗಬೇಕು. ತಾನಾಗಿ ಕಾಂತರಾಯನನ್ನು ಕೇಳಿ ಕೊಂಡರೆ ಬೇರೇ ಭಾವಿಸಬಹುದು........ಏತಕ್ಕೆ ಈ ಗೊಂದಲ? ಮಣೆ ಹಾಕಿ, ದೇವಿಯಂತೆ ಪೂಜೆ ಮಾಡಲು ಕಂಕಣಬದ್ಧನಾದ ರಾಯನನ್ನು ಮದುವೆ ಯಾದರೆ ಯಾರ ಕಂಗೂ ಇಲ್ಲ, ಭಯವೂ ಇಲ್ಲ.

ಹೀಗೆ ಕುಸುಮಳು ಯೋಚಿಸಿ ಯೋಚಿಸಿ ಯಾವ ನಿರ್ಧಾರಕ್ಕೂ ಬಾರದಂತಹ ಸ್ಥಿತಿಯಲ್ಲಿರುವಾಗ ಬರಿದಾದ ಕುದುರೆ ಗಾಡಿಯೊಂದು ಮನೆ ಮುಂದೆ ಹಾದು ಹೋಗುವುದನ್ನು ಕಂಡು ಅದನ್ನೇರಿ ರಾಯರ ಮನೆ ಸೇರಿದಳು.

೧೭

ಕುಸುಮಳ ಮನೆಯಿಂದ ಹೊರಬಿದ್ದವನೇ ಪ್ರಭಾಕರನು ರಾಯರ ಮನೆಗೆ ಹೋದ. ರಾಯರು ಸ್ನಾನ ಮಾಡುತ್ತಿದ್ದುದರಿಂದ ಸ್ವಲ್ಪ ತಡೆಯಬೇಕಾಯಿತು. ಗಂಜೀ ಅಂಗಿಯನ್ನು ಹಾಕಿಕೊಂಡು ಬಕ್ಕನೆತ್ತಿಯನ್ನು ಸವರಿಕೊಳ್ಳುತ್ತ ರಾಯರು ಪ್ರಭಾಕರನು ತನಗಾಗಿ ಕಾಯುತ್ತ ಕುಳಿತಿದ್ದ ಕೋಣೆಗೆ ಬಂದನು. ಅವರು ಮಾತನ್ನಾರಂಭಿಸುವಷ್ಟರಲ್ಲೇ ಕುಸುಮಳೂ ವರಾಂಡದಲ್ಲಿ ಬಂದು ಸೇರಿದಳು. ಇವರ ಮಾತಿನ ಗತಿಯನ್ನು ತಿಳಿಯುವ ನೆವದಿಂದ ಅಲ್ಲೇ ನಿಂತು ಬಿಟ್ಟಳು.

"ಯಾಕೆ ಪ್ರಭಾಕರ್, ಎಷ್ಟು ಹೊತ್ತಾಯಿತು ನೀನು ಬಂದು?''

"ಐದು ನಿಮಿಷ ಅಷ್ಟೇ'' ಎಂದು ಹೇಳಿದ ಕೂತ ಸ್ಥಳದಿಂದೇಳುತ್ತ.

"ಕುಳಿತುಕೋ, ಇರಲಿ. ನನ್ನ ಹತ್ತಿರ ಏತಕ್ಕೆ ಬರುವುದಾಯಿತು ನೀನು? ಕುಟುಂಬರಾಯರೊಂದಿಗೆ ನನ್ನ ಅಭಿಪ್ರಾಯ ಸೂಚಿಸಿದ್ದೇನೆ. ಈ ವಿಷಯ ನನ್ನ ವರೆಗೆ ಬರಬಾರದೆಂದು ಹೇಳಿದ್ದೆನಲ್ಲ?''

"ಅಲ್ಲ ರಾಯರೇ, ನೀವು ಯಾವ ವಿಷಯ ಮಾತನಾಡುತ್ತಿರುವಿರಿ? ನಿಮ್ಮ ಮಾತೇ ನನಗರ್ಥವಾಗಿಲ್ಲ. ನಾನು ಬಂದ ಕೆಲಸವೇನೆಂದು ಭಾವಿಸಿದಿರಿ?"

"ನೀನು ನಮ್ಮ ಕಂಪೆನಿ ಬಿಡುವ ವಿಷಯ ತಾನೆ?''

ಪ್ರಭಾಕರನಿಗೆ ಆಶ್ಚರ್ಯವಾಯಿತು. "ನಿಮಗೆ ಹೇಗೆ ತಿಳಿಯಿತು, ನಾನದೇ ಕೆಲಸದ ಮೇಲೆ ಬಂದಿರುವೆನೆಂಬುದು? ನಾನಿನ್ನೂ ಆ ವಿಷಯ ಹೇಳಿಲ್ಲವಲ್ಲ? ಯಾರು ಹೇಳಿದರು?''

ಸತ್ಯನಾರಾಯಣರಾಯರು ಗೊಂದಲದಲ್ಲಿ ಬಿದ್ದರು. ಆದರೂ ಚೇತರಿಸಿಕೊಂಡು "ಇಲ್ಲಿ ನೋಡು, ಪ್ರಭಾಕರ. ನಿನ್ನನ್ನು ನಮ್ಮ ನಾಟಕ ಕಂಪೆನಿಯಿಂದ ತೆಗೆದು ಹಾಕಿದ್ದೇವೆಯೆಂದು ಕುಟುಂಬರಾಯರು ನಿನಗೆ ಹೇಳಲಿಲ್ಲವೇನು?''

"ಇಲ್ಲವಲ್ಲ. ನನ್ನನ್ನು ಯಾರೂ ಕೆಲಸದಿಂದ ಹೊರಗೆ ಹಾಕಲಿಲ್ಲವಲ್ಲ? ಯಾರು ತೆಗೆದು ಹಾಕುವವರು?"

"ನಾನೇ."

"ನೀವೇ? ಏತಕ್ಕೆ?"

"ಅದೆಲ್ಲವನ್ನು ಚರ್ಚಿಸುವುದಕ್ಕೆ ಸಮಯವಿಲ್ಲ. ಕುಟುಂಬ ರಾಯನು ನಿನಗೆ ಈ ವಿಷಯ ತಿಳಿಸದೇ ಇದ್ದಲ್ಲಿ ನೀನೇತಕ್ಕೆ ಬಂದೆ ಈಗ?"

"ನಾನೇ ನನ್ನ ಕೆಲಸಕ್ಕೆ ರಾಜೀನಾಮೆ ಕೊಡುವ ಕಾರಣದಿಂದ ನಿಮ್ಮನ್ನು ಕಂಡು ಹೋಗಲು ಬಂದೆ."

ಇದರಲ್ಲೇನೋ ಮೋಸವಿದೆ ಎಂದು ಅನುಮಾನಿಸಿ ರಾಯನು "ಕೆಲಸಕ್ಕೆ ರಾಜೀನಾಮೆ ಕೊಡಲು ಕಾರಣಗಳೇನೆಂಬುದನ್ನು ನಾನು ತಿಳಿಯಬಹುದೆ?' ಎಂದು ಕೇಳಿದನು.

"ನಿಸ್ಸಂಶಯವಾಗಿ. ಅದನ್ನು ವಿವರವಾಗಿ ಹೇಳಬೇಕೆಂದೇ ಈಗ ಬಂದುದು. ನಿಮಗೆ ಕುಸುಮಳ ಪರಿಚಯವಿದೆ ತಾನೆ? ಅವಳು ಸೊಗಸಾಗಿ ಹಾಡಬಲ್ಲಳು. ಈ ವಿಷಯ ನನಗಿಂದೇ ತಿಳಿಯಿತು. ಅವಳನ್ನು ನಿಮ್ಮ ಕಂಪೆನಿಯಲ್ಲಿ ಸೇರಿಸಿಕೊಂಡರೆ ಬಹಳ ಅನುಕೂಲ, ಮತ್ತು ಲಾಭದಾಯಕ".

"ಅಲ್ಲಯ್ಯಾ, ನೀನು ನಮ್ಮ ಕಂಪೆನಿ ಬಿಡೋದಕ್ಕೂ ಇದಕ್ಕೂ ಏನು ಸಂಬಂಧ?"

"ಮರೆತೆ. ನಾನು ಕೂಡ ಈ ಕಂಪೆನಿಯಲ್ಲಿದ್ದರೆ, ಕುಸುಮಳು ವೇಷ ಹಾಕಲು ಸಮ್ಮತಿಸಲಾರಳು. ನಾನು ಈ ಕಂಪೆನಿಯಲ್ಲಿ ಇಲ್ಲವೆಂದು ಹೇಳಿ ಬಿಡಿ. ನನಗೆ ಕಂಪೆನಿಯ ಏಳಿಗೆಯೇ ಮುಖ್ಯ. ಅವಳು ಹೆಣ್ಣು ಪಾರ್ಟು ಹಾಕಲು ಒಪ್ಪಿದರೆ....?"

"ನೀವಿಬ್ಬರೂ ಸ್ನೇಹಿತರಂತಲ್ಲವೆ?"

"ಅಂತಹ ಅದೃಷ್ಟವಿದೆ ಎಂದು ನಾನು ಹೇಳಲಾರೆ".

"ಇರಲಯ್ಯಾ, ಅವಳೇ ಹೇಳಿ ಕೊಳ್ಳುತ್ತಾ ಇದ್ದಾಳೆ, ನೀನವಳ ಆಪ್ತ ಮಿತ್ರನೆಂದು....?"

"ನನ್ನ ಸ್ನೇಹದ ಬಗ್ಗೆ ಆಕೆಗೆ ತಪ್ಪು ಅಭಿಪ್ರಾಯವಾಗಿರಬಹುದು. ನನ್ನ ಸ್ನೇಹಪರ ವರ್ತನೆ ಎಲ್ಲವೂ ಆಡಂಬರದ ಬೂಟಾಟಿಕೆಯೆಂದು

ತಿಳಿದಿರಬಹುದು. ಸುಧಾರಕನೆಂಬ ನನ್ನ ಸೋಗಿನಲ್ಲಿ ಹುರುಳಿಲ್ಲವೆಂದು ತಿಳಿದಿರಬಹುದು. ರೂಢಿ ಆಚಾರಗಳ ಹಾದಿಯನ್ನು ಬಿಟ್ಟು ಅನಾಚಾರದ ವರ್ತನೆಯಲ್ಲಿ ಕಾಲಿಡಲು ನನಗೆ ಧೈರ್ಯವಿಲ್ಲವೆಂಬುವುದು ತಿಳಿದಿರಲಿಕ್ಕಿಲ್ಲ. ನಾನು ಕಪಟಿ. ನನ್ನ ನಡತೆ ತೀರ ಮೋಸವೆಂದು ಅವಳು ಇಷ್ಟು ಹೊತ್ತಿಗೆ ತಿಳಿದಿರಲಿಕ್ಕೆ ಸಾಕು. ಸಮಾಜವನ್ನೆದುರಿಸಿ, ಹಳೆಯ ಸಂಪ್ರದಾಯವಂತರಾದ ತಂದೆತಾಯರನ್ನು ತೊರೆದು ಕುಸುಮಳ ನಿರ್ಮಲ ಪ್ರೇಮ ಹಸ್ತವನ್ನು ಸ್ವೀಕರಿಸುವಷ್ಟು ಧೈರ್ಯ ನನ್ನಲ್ಲಿಲ್ಲವೆಂಬುದು ಇಂದೇ ಅವಳಿಗೆ ತಿಳಿಯಿತು. ನಾನು ಬರೇ ಮಾತುಗಾರನೆಂಬುವುದು ಅವಳಿಗೆ ಮನವರಿಕೆಯಾಗಿದೆ. ಅವಳು ನನ್ನನ್ನು ಕ್ಷಮಿಸಲಾರಳು. ನಾನವಳನ್ನು ಮೋಸ ಮಾಡಬಾರದಾಗಿತ್ತು. ಈಗ ಇನ್ನೇನು ಮಾಡುವುದು?''

"ಆಯಿತು. ನಿನ್ನ ರಾಜಿನಾಮೆಯನ್ನು ನಾನು ಸ್ವೀಕರಿಸುತ್ತೇನೆ. ನೀನಿನ್ನು ಹೊರಡಬಹುದು."

"ಆಗಬಹುದು. ನಾನು ಹೊರಡುತ್ತೇನೆ. ಆದರೆ ಅವಳನ್ನು ನಮ್ಮ ನಾಟಕವೃಂದದಲ್ಲಿ ಸೇರಿಸಿಕೊಳ್ಳುವ ವಿಷಯ ಮಾತ್ರ ಮರೆಯಬಾರದು."

''ಅದೆಲ್ಲಾ ನಾನು ನೋಡಿ ಕೊಳ್ತೇನೆ. ಇನ್ನು ನೀನು ಹೊರಡು. ಹೂಂ. ನನಗೂ ಕೆಲಸವಿದೆ. ನಡೆ''.

''ಅಷ್ಟೇಕೆ ಅವಸರ ಮಹಾ ಸ್ವಾಮಿ? ಮಾನ ಮರ್ಯಾದೆ ತಿಳಿದು ಮಾತನಾಡುವ ಪರಿಪಾಠ ನಿಮಗೆ ಇಲ್ಲವೆಂದು ಕಾಣುತ್ತದೆ. ನಾನೆಷ್ಟು ಮರ್ಯಾದೆಯಿಂದ ಮಾತನಾಡಿದರೂ ನಿಮ್ಮ ಬಾಯಿ ಉದ್ದವಾಗ ಹತ್ತಿದೆ. ನಿಮ್ಮ ನಾಲಿಗೆಗೆ ಅಳತೆ ಇಲ್ಲವೇನು? ನಾಟಕದಲ್ಲಿ ವೇಷ ಹಾಕಲು ಬಂದೆವೆಂದರೆ ನಮ್ಮ ವ್ಯಕ್ತಿ ಮತ್ತು ಆತ್ಮಗಳನ್ನು ಮಾರಿಕೊಂಡು ನಿಮ್ಮ ಗುಲಾಮರಾಗಲು ಬಂದೆವೆಂದು ತಿಳಿದಿರೇನು? ಇದೇ ಸಮಯಕ್ಕೆ ನಮ್ಮ ಕಾಂತನು ಇರಬೇಕಾಗಿತ್ತು. ನಿಮ್ಮ ಪರಟ ನೆತ್ತಿ, ಈ ಹರಕು ಮೀಸೆಗಳ ಗತಿಯೇನಾಗುತ್ತಿತ್ತೋ. ನಾಟಕದಂಥೆಯೆಂದರೆ ಏನೂ ತಿಳಿಯದ ನಿಮಗೆ ಹಾದಿ ತೋರಿಸಿ, ಅಳಿದುಹೋಗುವ ಕಂಪೆನಿ

ಯನ್ನು ಎತ್ತಿಹಿಡಿದು ನಿಲ್ಲಿಸಲು ಬಂದ ನನಗೆ ಇದುವೆ ಮರ್ಯಾದೆ? ನಿಮ್ಮ ಈ ಅಸಭ್ಯ ನಡತೆಗೆ ನೀವು ಪಾಠ ಕಲಿಯಬೇಕಾದೀತು. ನಿಮ್ಮ ಈ ಸೋಗಿನ ಆಟ ಬಯಲಿಗೆ ಬಿದ್ದಾಗ ನನ್ನ ಕಾಲುಗಳ ಮೇಲೆ ನೀವು ಬೀಳುವ ಸಮಯ ಬಂದೀತು. ಮರ್ಯಾದೆಕೊಟ್ಟು ಮರ್ಯಾದೆ ತೆಗೆದು ಕೊಳ್ಳಬೇಕೆಂಬ ಹಿರಿಯರ ಮಾತು ನೆನಪಿನಲ್ಲಿರಲಿ ನಮಸ್ಕಾರ"

"ಛೇ, ಛೇ ಪ್ರಭಾಕರ. ಅಷ್ಟೇಕೆ ಕೋಪ. ಕುಳಿತುಕೋ. ಇನ್ನೇನು ನಮ್ಮನ್ನು ನೀನಾಗಿಯೇ ಬಿಡುತ್ತಿರುವಿ. ನನ್ನದೇನು ತಪ್ಪಿದೆ ಇದರಲ್ಲಿ? ನಿನಗೆ ಅವಮರ್ಯಾದೆ ಇಲ್ಲ........ಇಲ್ಲ........ಹೋಗಬೇಡ– ಸ್ವಲ್ಪ ಕಾಫಿ........" ಎಂದು ಹೇಳುವಷ್ಟರಲ್ಲಿ ಪ್ರಭಾಕರನು ಬಹುದೂರ ಹೋಗಿ ಬಿಟ್ಟಿದ್ದ. ರಾಯರು ತಾವು ಮಾಡಿದುದು ತಪ್ಪೆಂದು ನೆನೆದು ಹಿಂತಿರುಗಿ ಒಳಮನೆಗೆ ಹೋಗಬೇಕೆಂದಿರುವ ಸಮಯಕ್ಕೆ ಮತ್ತಾರೋ ಕೋಣೆಯೊಳಗೆ ಬಂದಂತೆ ಭಾಸವಾಯಿತು. ನೋಡ್ತಾನೆ, ಕುಸುಮಳು ಒಳಗೆ ಬಂದವಳೇ ಅಲ್ಲಿದ್ದ ಕುರ್ಚಿಯಲ್ಲಿ ಕುಳಿತುಬಿಟ್ಟಳು. ಅಂದಿನ ಅವಳ ಸ್ವಭಾವವೇತಕ್ಕೋ ಹೊಸರೀತಿಯದಾಗಿದ್ದಿತು. ಹಾಗವಳು ಯಾವ ಮಾತನ್ನೂ ಆಡದಿದ್ದುದನ್ನು ನೋಡಿ, "ಇದೇನು ಕುಸುಮಾ, ಎಂಥಾ ಸುದಿನವಿದು. ಅಲ್ಲಾ, ನೀನಾಗಿ ನನ್ನ ಮನೆಗೆ ಬರುವುದೆಂದರೆ ಲಕ್ಷ್ಮಿ ನಲಿಯುತ್ತ ಬಂದಂತೆ. ಅದು, ಪ್ರಭಾಕರನು ಕಡೆಯ ಭೆಟ್ಟಿ ಗೆಂದು ಈಗಲೇ ಬಂದು ಹೋದ. ಕೂಡಲೇ ನೀನು, ಛಲೋ ಆತು ಬಿಡು. ಅಂತೂ...." ಎಂದು ಮುಸಿ ಮುಸಿ ನಗುತ್ತ, ಹರಕು ಮೀಸೆ ಗಳನ್ನು ತೀಡುತ್ತ ಹೇಳಿದ ಸತ್ಯನಾರಾಯಣರಾಯರ ಮಾತುಗಳು ರುಚಿಸದಿದ್ದರೂ ಕುಸುಮಳು ಸ್ವಲ್ಪಹೊತ್ತು ಸುಮ್ಮನೇ ಕುಳಿತಿರ ಬೇಕಾಯಿತು.

"ಯಾಕೆ? ಸುಮ್ಮನಿರುವಿ? ಬಂದ ಕೆಲಸವಾದರೂ ಏನು?" ಎಂದು ಮತ್ತೆ ಕೇಳಿದ ರಾಯನು.

"ಏನೂ ಇಲ್ಲ, ನಿಮ್ಮನ್ನು ಮದುವೆಯಾಗಲು ನನಗೆ ಯಾವ ಅಭ್ಯಂತರವಿಲ್ಲೆಂದು ಹೇಳಲು ಬಂದೆ." ಎಂದು ದಿಟ್ಟತದಿಂದ ಕುಸುಮ ಳು ಹೇಳಿದ ಮಾತುಗಳನ್ನು ಕೇಳಿದ ಕೂಡಲೇ ಕೂತ ಕುರ್ಚಿಯಿಂದ

ಜಿಗಿದೆದ್ದು, ಓಡಿಬಂದು ಕುಸುಮಳ ಎರಡೂ ಕೈಗಳನ್ನು ಹಿಡಿದು ಕೊಂಡನು.

"ನಿಲ್ಲಿ ನಿಲ್ಲಿ, ಅವಸರವೇಕೆ? ನಾನು ನಿಮ್ಮನ್ನು ಮದುವೆಯಾಗ್ತೀನೆಂತ ಪೂರ್ತಿ ಹೇಳಿಲ್ಲ. ಮದುವೆಯಾಗಲು ಯಾವ ಅಭ್ಯಂತರವೂ ಇಲ್ಲವೆಂದು ಹೇಳಿದೆ. ಅಷ್ಟೇ; ನೆನಪಿರಲಿ, ಮತ್ತೆ" ಎಂದು ಕುಸುಮಳು ತಡೆದು, ಕೈಗಳನ್ನು ಕೊಸರಿಕೊಂಡು ದೂರ ಸರಿದಳು.

"ಹಾಗಾದರೆ ಹೇಳಿ ಬಿಡು ಸ್ಪಷ್ಟವಾಗಿ. ಯಾಕೆ ಈ ಸಂಕಟ ನಂಗೆ?"

"ಮನೆಯಿಂದ ಬರುವ ಸಮಯದಲ್ಲಿ ನಿಮ್ಮನ್ನು ಮದುವೆಯಾಗಬೇಕೆಂಬ ನಿರ್ಧಾರದಿಂದ ಬಂದೆ. ಆದರೆ ಇಲ್ಲಿಗೆ ಬಂದು ನಿಮ್ಮ ಮನೆಯಲ್ಲಿ ನಿಮಗೂ ಪ್ರಭಾಕರರಿಗೂ ನಡೆದ ಸಂಭಾಷಣೆಯನ್ನು ಕೇಳಿ ನಿಮ್ಮ ನೀಚತನವೆಂತಹದೆಂಬುವುದನ್ನು ತಿಳಿದುಕೊಂಡೆ. ಈ ಜನ್ಮದಲ್ಲಿ ಸನ್ಯಾಸಿಯಾಗುವೆನೇ ಹೊರತು ನಿಮ್ಮನ್ನೆಂದಿಗೂ ಮದುವೆಯಾಗಲಾರೆ. ನಿಮ್ಮಂಥ ನೀಚ ಮನಸ್ಸಿನವರನ್ನೆಲ್ಲಿಯೂ ನೋಡಿಲ್ಲ. ಸಾಕು ಮಾಡ್ರಿ ನಿಮ್ಮ ಢಾಂಬಿಕತನವನ್ನು. ಯಾಕೆ ಈ ಆಡಂಬರದ ಸೋಗು? ವಯಸ್ಸಾಯಿತು. ಆದರಿಂದಲಾದರೂ ನಿಮ್ಮ ಅನುಭವಕ್ಕೆ ಬಂದಿರಲಿಕ್ಕಿಲ್ಲವೆ? ನೀವು ಈ ರೀತಿ ಇನ್ನೊಬ್ಬರಿಗೆ ಅನ್ಯಾಯ ಮಾಡುವುದು ವಂಚನೆಯಲ್ಲವೆ?'' ಎಂದು ಕುಸುಮಳು ಹೇಳುವಾಗ ಅವಳಲ್ಲಿ ಯಾವ ಬಗೆಯ ಕ್ರೋಧವಾಗಲಿ, ರೋಷವಾಗಲಿ ಇರಲಿಲ್ಲ. ದೊಡ್ಡ ಸ್ವರದಲ್ಲಿ ತನ್ನನ್ನೀ ರೀತಿ ಬೈಯುತ್ತಿರುವುದು ರಾಯನಿಗೆ ತೀವ್ರವಾದ ಬಾಧೆಯನ್ನುಂಟು ಮಾಡಿತು. ರಾಯನದನ್ನು ಸಹಿಸಲಾರದೆ ಕೈ ಕೈ ಹಿಚುಕತೊಡಗಿದ. ಅಷ್ಟರಲ್ಲೇ ಹೊರಗೆ ಹೋಗುವುದಕ್ಕೆಂದು ಕುಸುಮಳು ಎದ್ದು ನಿಂತಳು. ರಾಯರವಳನ್ನು ತಡೆದು, ''ಇರು, ಇರು ಸ್ವಲ್ಪ. ನಾನು ನಿನಗೇನು ದ್ರೋಹ ಮಾಡಿದೆ?....'' ಎಂದು ಏನನ್ನೋ ಹೇಳುವುದನ್ನು ಕುಸುಮಳು ತಡೆದು "ಇನ್ನೇನು ಬೇಕು? ನನಗೇನಾದರೂ ಅನ್ಯಾಯ ಮಾಡಿ, ಸಹಿಸುತ್ತೇನೆ....ಪಾಪ, ಪ್ರಭಾಕರರೇನು ಮಾಡಿದರು? ಅವರನ್ನೇತಕ್ಕೆ ಕಂಪೆನಿಯಿಂದ ಹೊರಗೆ ಹಾಕಿದಿರಿ? ಅಳಿಯುತ್ತಿರುವ, ನಿರ್ನಾಮವಾಗುತ್ತಿದ್ದ ನಿಮ್ಮ ಕಂಪೆನಿಗೆ ಕಳೆ ತಂದು, ಮತ್ತೆ

ತಲೆ ಎತ್ತಿ ನಿಲ್ಲುವಂತೆ ಮಾಡಿದುದು ಅವರ ತಪ್ಪಲ್ಲವೆ? ತಾವು ಕಂಪೆನಿ ಯನ್ನು ಬಿಟ್ಟರೂ ಕಲೆಗಾಗಿ, ಕಲೋದ್ಧಾರಕ್ಕಾಗಿ ಅವರು ಮಾಡಿದ ಸಲಹೆಯನ್ನು ತಿಳಿದ ಮೇಲಾದರೂ ನಿಮ್ಮ ನಿರ್ಧಾರ ಬೇರೆಯಾಯಿತೆ? ಕಂಪೆನಿಯನ್ನು ಬಿಡಬೇಡವೆಂದು ಕೇಳಿಕೊಳ್ಳಲು ನೀವೇಕೆ ಮುಂದೆ ಬರಲಿಲ್ಲ? ಸ್ವಾರ್ಥಪರಾಯಣರಾದ ನಿಮ್ಮಂಥ ನೀಚರಿಂದಲೇ ಸಮಾಜ ಕೆಟ್ಟದೆ. ನಿಮ್ಮಲ್ಲಿ ಮಾನವತೆ ಇದ್ದರಲ್ಲವೇ ನಿಮ್ಮ ಹೃದಯವು ಕರಗು ವುದು? ಸುಡಲಿ ನಿಮ್ಮ ಬಾಳು!" ಎಂದು ಹೇಳಿ ಕುಸುಮಳು ಸರ ಸರನೆ ಹೊರಗೆ ಹೋಗಿ ಬಿಟ್ಟಳು. ಇದೇನು ಬಂತಪ್ಪ, ಮಾರಿಯು ಕಾಟವೆಂದು ಅವಳು ಹೋದ ಹಾದಿಯನ್ನೇ ನೋಡಿ ಏನೂ ತೋಚದೆ ಎರಡು ಕೈಗ ಳಿಂದ ಗಿರ್ರನೆ ತಿರುಗುವಂತಿದ್ದ ತಲೆಯನ್ನು ಹಿಡಿದುಕೊಂಡು ವಿರಾಮ ಕುರ್ಚಿಯ ಮೇಲೆ ಕುಸಿದು ಬಿದ್ದರು ರಾಯರು.

# ೧೮

ಕುಸುಮಳು ಆ ರೀತಿ ಬೈದು ಹೋದರೂ ರಾಯನು ತನ್ನ ನಿಶ್ಚಯವನ್ನು ಬದಲಾಯಿಸಲಿಲ್ಲ. ಹಿಂದೆ ನಾಯಕನ ಪಾತ್ರ ಮಾಡುತ್ತಲಿದ್ದ ಕುಮಾರಸ್ವಾಮಿಯನ್ನು ಪ್ರಭಾಕರನು ಹಾಕಿದ ವೇಷಕ್ಕೆ ಸಿದ್ಧಗೊಳಿಸಬೇಕೆಂದು ಮೊದಲೇ ನಿಶ್ಚಯ ಮಾಡಲಾಗಿತ್ತು. ರಿಹರ್ಸಲ್ಸು ಭರದಿಂದ ನಡೆದಿದ್ದುವು. ನಾಟಕ ದಿನಕ್ಕಿನ್ನು ಎರಡೇ ದಿನಗಳು ಉಳಿದಿದ್ದುದರಿಂದ ರಾತ್ರಿ, ಹಗಲೂ ಅಭ್ಯಾಸ ನಡೆದಿತ್ತು. ಆದರೆ ಇವರ ರಿಹರ್ಸಲ್ಸಿಗೆ ಪ್ರಭಾಕರನಾಗಲಿ, ಕಾಂತರಾಯನಾಗಲಿ ಬರುತ್ತಿರಲಿಲ್ಲ.

ಪ್ರಭಾಕರನು ನಡೆದ ಎಲ್ಲಾ ವಿಷಯವನ್ನು ವಿವರಿಸಿ ಕಾಂತನಿಗೆ ಹೇಳಿದ್ದನು.

"ಅಲ್ಲೋ ಕಾಂತ, ನನ್ನನ್ನು ಕಂಪೆನಿಯ ಕೆಲಸದಿಂದ ತೆಗೆದು ಹಾಕಬೇಕೆಂದು ಕುಟುಂಬರಾಯನಿಗೆ ನಿನ್ನೆ ಹೇಳಿದ್ದಾನಂತಲ್ಲ, ಆ ಮುದಿಯ" ಎಂದು ಕೇಳಿದ ಪ್ರಭಾಕರ.

"ಹೌದೋ, ಆದರೆ ನಮ್ಮ ಮಾವ ಕುಟುಂಬರಾಯನಿಗೆ ನಮ್ಮನ್ನು ಗಡಿಬಿಡಿಯಲ್ಲಿ ನೋಡುವುದಾಗಲೇ ಇಲ್ಲ ನಿನ್ನೆ ರಾತ್ರಿ. ಇವತ್ತು ಮುಂಜಾನೆ ನೀನು ಬಹಳೇ ಬೇಗ ಎದ್ದು ಹೊರಗೆ ಹೋಗಿದ್ದಿ. ಅದಿರಲಿ, ಈಗ ಈ ಮುದುಕನಿಗೆ ಹೇಗೆ ಬುದ್ಧಿ ಕಲಿಸೋದೂಂತ ಯೋಚಿಸುತ್ತಿದ್ದೀನಿ".

"ರಾಯನು ನಾನೇತಕ್ಕೆ ಹೋಗಬೇಕೆಂದು ಹಠ ಹಿಡಿದ?"

"ಅವನು ಕುಸುಮಳನ್ನು ಬಲೆಯಲ್ಲಿ ಹಾಕಿ ಕೊಳ್ಳಬೇಕೆಂದು ಹಂಚಿಕೆ ಹಾಕಿದಂತೆ ನನಗಂದೇ ಅನುಮಾನ ಬಂದಿತ್ತು. ಕುಸುಮಳು ಎಂದವನ ಮಕ್ಕಳಿಗೆ ಓದು ಹೇಳ್ತೀನಿ ಎಂದು ಹೇಳಿದಳೋ, ಆಗಲೇ ನನಗೆ ಇದರ ಗುಟ್ಟು ಹೀಗೆಯೇ ಇರಬೇಕೆಂದು ತರ್ಕಿಸಿದ್ದೆ. ಅದೆಲ್ಲಾ ಇರಲಪ್ಪ. ಅದ್ಯಾಕೆ ನೀನು ಕುಸುಮಳ ಮನನೋಯುವಂತೆ ಮಾತನಾಡಿದೆ? ನೀನು ಮಾಡಿದ್ದು ಬಹಳ ಥಡ್ಡ ಕೆಲಸ ನೋಡು."

"ನನ್ನ ದುರದೃಷ್ಟ! ಬಾಯಿತಪ್ಪಿ ಆ ಮಾತು ಬಂದು ಬಿಟ್ಟಿತು. ಮಾಡಲೇನು? ಆಡಿದ ಮಾತಿಗೆ ಅನುಭವಿಸಲೇ ಬೇಕು ಮತ್ತೆ. ಕುಸು

ಮಳ ಕುಲವಾವುದಾದರೇನು? ಅಂದು ನನಗಸಹ್ಯವಾಗಿ ಕಂಡು ಬಂದುದು ಈ ಸೂಳೆಯರ ಸಂಸಾರದ ರೀತಿ ನೀತಿ. ಆದರೆ ಕುಸುಮಳ ಮೇಲೆ ನನಗೆಲ್ಲಿಯ ಕೋಪ? ಅಸಹ್ಯ?"

"ಹಾಗಿದ್ದರೆ, ಅವಳು ಸಿಟ್ಟಿಗೆದ್ದಾಗ, ನೀನ್ಯಾಕೆ ಅವಳ ಕ್ಷಮೆಬೇಡಲಿಲ್ಲ, ಹೇಳು. ಎಲ್ಲವನ್ನೂ ವಿವರವಾಗಿ ಹೇಳಿದ್ದರೆ ಪ್ರಸಂಗ ಇಷ್ಟು ವಿಪರೀತಕ್ಕಿಟ್ಟುಕೊಳ್ಳುತ್ತಿರಲಿಲ್ಲ".

"ನನಗ್ಯಾಕೋ ಧೈರ್ಯ ಬರಲಿಲ್ಲ. ಮಾಡಿದ ಪಾಪಕ್ಕೆ ತಕ್ಕ ಉಪಶಾಂತಿ ಪ್ರಾಯಶ್ಚಿತ್ತದಲ್ಲೇ ಹೊರತು, ಪಶ್ಚಾತ್ತಾಪ, ಕ್ಷಮಾಪಣೆ, ಮುಂತಾದುವುಗಳಲ್ಲಿ ನನಗೆ ನಂಬಿಕೆ ಇಲ್ಲ ಕಾಂತ್."

"ಅತ್ತ ಹಾಗೇ ಆದೆ ನಿನ್ನ ತತ್ವ. ಅದೇನೇ ಇರಲಿ. ಕುಸುಮಳನ್ನು ಹ್ಯಾಗಾದರೂ ಸಮಾಧಾನ ಮಾಡಬಹುದು. ಮತ್ತೊಂದು ಸಂಕಟ ಬಂತಲ್ಲ ಮತ್ತೆ. ಮೊದಲು ಸತ್ಯನಾರಾಯಣರಾಯನ ಹಂಚಿಕೆಗೆ ತಕ್ಕ ಪ್ರತೀಕಾರ ಮಾಡಿ, ನೀನು ಎಚ್ಚರಿಸಿದಂತೆ, ಆವನು ನಮ್ಮ ಕಾಲುಗಳ ಮೇಲೆ ಬೀಳುವಂತೆ ಮಾಡಬೇಕು."

"ಅದು ಹೇಗೆ ಸಾಧಿಸಬಲ್ಲೆ?"

ಯೋಚನೆಯಲ್ಲಿ ಮುಳುಗಿದ್ದ ಕಾಂತರಾಯನು ಒಮ್ಮಿಂದೊಮ್ಮೆಲೇ ಎದ್ದು ನಿಂತವನೇ "ಒಂದು ಬೇಬಿ ಕಾರು ಬೇಕು ನೋಡೋ. ಈಗ ಅದು ಸಿಕ್ಕಿತೆಂದರೆ ಸಾಕು" ಎಂದು ಹುಚ್ಚನಂತೆ ಹರಟೆ ಕೊಚ್ಚಿದನು. ಅವನ ಮಾತಿನ ಅರ್ಥವೇನೂ ಆಗಲಿಲ್ಲ ಪ್ರಭಾಕರನಿಗೆ.

"ಕಾರ್ಯಾಕೆ ಬೇಕಪ್ಪ, ನಿಂಗೆ? ಅದರಿಂದೇನು ಮಾಡ್ತೀ ಹೇಳು?" ಎಂದು ಕೇಳಿದ ಪ್ರಭಾಕರ.

"ಇರಲಿ ಬಾರೋ. ಷಿಕಾರಿಗೆ ಬೇಕಪ್ಪ. ಕಾರಿನಾಗೆ ಕೂಡ ಬೇಕೊಂತ ಮನ ಆಗೆದ, ಅಷ್ಟೆ. ಮತ್ತೇನು?" ಎಂದು ಸುಮ್ಮನೇ ಚೀರಿಕೊಂಡ.

"ನೀನು ಯಾವಾಗ ಷಿಕಾರಿಗೆ ಹೋಗೋನು?

"ನಾಳೆ, ಸಾಯಂಕಾಲ."

"ಅಲ್ಲ, ನಾಟಕದ ಗತಿ ಏನಾಗಬೇಕು?"

“ಅಹುದೋ, ಅದಕ್ಕೇನೆ ಷಿಕಾರಿಗೆ ಹೋಗಬೇಕೂಂತ ನಿಶ್ಚಯಿಸಿದ್ದೀನಿ ಬಾ ಬ್ರದರ್.”

“ಅಲ್ಲಾ, ನಾನೂ ಬರಬಹುದೆ ನಿನ್ನ ಹಿಂದೆ?”

“ಛೇ, ಕೆಲಸಾ ಕೆಟ್ಟಿತ ನೋಡೂ ಅಂದೆ. ನಾಳೆಲ್ಲಾ ನೀನು ಮನೀಬಿಟ್ಟು ಹೊರಗೆ ಹೋಗಬಾರ್ದು, ತಿಳೀತೆ. ಈ ಏರ್ಪಾಟೇನಾದ್ರೂ ತಪ್ಪಿತೂಂದ್ರೆ ನಮ್ಮ ಪ್ಲಾನೇ ಕೆಡ್ತದ ನೋಡು. ನೆನಪಿರಲಿ ಮತ್ತೆ.”

“ಇದೇಕೋ ಇಂಥಾ ಕರಾರು?”

“ಇದು ನನ್ನ ಆಜ್ಞೆ.”

“ಯಾಕೋ ಮಹಾರಾಯ?”

“ಹೇಳೋದಕ್ಕೂ ಕೇಳೋದಕ್ಕೂ ಇದು ಸಮಯವಲ್ಲ. ನಮ್ಮ ಕಾರ್ಯ ಸಾಧಿಸಿದರೆ, ಆಯ್ತಲ್ಲೋ? ನಾ ಹೇಳಿದಂತೆ ಮಾಡು.”

ಮಾರನೆಯ ದಿನ ಸಾಯಂಕಾಲ ನಾಲ್ಕರ ಸಮಯ. ನಾಟಕ ಭವನದ ಹತ್ತಿರ ಕಾರಿನಲ್ಲಿ ಕಾಂತರಾಯನು ಬಂದ. ಸ್ಟೇಜಿನಲ್ಲಿ ರಾತ್ರಿ ನಾಟಕದ ರಿಹರ್ಸಲ್ಲು ನಡೆದಿತ್ತು. ಕುಮಾರಸ್ವಾಮಿ ಪಟ್ಟು ಹಿಡಿದು ಪಾಠಮಾಡುತ್ತಿದ್ದಾನೆ. ಅವನ ಹಳೆಯ ಸ್ನೇಹಿತರೆಲ್ಲರೂ ಬಹಳ ಚೆನ್ನಾಗಿದೆಯೆಂದು ಹೊಗಳಿ ಪ್ರೋತ್ಸಾಹ ಕೊಡುತ್ತಲಿದ್ದಾರೆ.

ಎಲ್ಲಾ ಮುಗಿಯುವ ಹೊತ್ತಿಗೆ ಕಾಂತರಾಯನು ಹಾಲ್‌ನಲ್ಲಿ ಬಂದನು. ನಟರೆಲ್ಲರೂ ಸಂತೋಷವನ್ನು ವ್ಯಕ್ತಮಾಡಿದರು. ಕುಮಾರ ಸ್ವಾಮಿಯನ್ನು ಹತ್ತಿರ ಕರೆದು “ಬಹಳ ಭಲೋ ಆತು. ಎರಡೇ ದಿನದಲ್ಲಿ ನಾಯಕನ ಪಾರ್ಟು ತಯಾರ್ ಮಾಡಿದರಲ್ಲ. ಎಷ್ಟಾದರೂ ಹಳೆಯ ಗಡೀ ನೀನು. ಎಲ್ಹೋಗ್ತದೆ ಅನುಭವದ ಫಲ?” ಎಂದು ಬೆನ್ನು ಚಪ್ಪರಿಸಿ, ಅವನ ನೈಪುಣ್ಯಕ್ಕೆ ಮೆಚ್ಚಿದನು.

“ಬಿಡ್ರೀ ನಿಮ್ಮ. ಎಲ್ಲಾ ಹಾಸ್ಯಮಾಡ್ತೀರಿ.”

“ಛೇ, ಛೇ, ಎಲ್ಲಾದರೂ ಉಂಟೇ? ರಾತ್ರಿ ನೋಡ್ತೀವಲ್ಲ? ನನ್ನ ಮಾತು ಸುಳ್ಳಾದ್ರೆ ಜನರೇನಾದ್ರೂ ಸೂಳ್ಳಾಡ್ತಾರೆ? ನೋಡಿಯೇ ಬಿಡೋಣ” ಎಂದು ಅವನನ್ನು ಇನ್ನಷ್ಟು ಅಟ್ಟಕ್ಕೇರಿಸಿದನು.

ಕುಮಾರಸ್ವಾಮಿಗೆ ಹಿಡಿಸಲಾರದಷ್ಟು ಸಂತೋಷವೆನಿಸಿತು.

ಕಾಂತರಾಯನ ಹಿಂದೇ ಅವನೂ ಹೊರಗೆ ಬಂದನು. ಕಾಂತರಾಯನು ತನ್ನ ಬೇಬಿಕಾರನ್ನು ಸಮೀಪಿಸಿ ಅದರ ಮೇಲೆ ಕೈಯಿಡುತ್ತ "ಕಾರು ನೋಡಿದ್ರೇನು ಕುಮಾರ್. ನೋಡುವುದಕ್ಕೆ ಸೊಗಸಾಗಿದೆ. ಮಾರೋ ದಕ್ಕೆ ಬಂದದೆ. ಗ್ಯಾಲನಿಗೆ ನಾಲ್ವತ್ತು ಮೈಲಿ ಓಡುತ್ತದಂತೆ. ಅದು ನಿಜಾವಾದ್ರೆ ಕಾರು ತಗೊಂಡು ಬಿಡೋಣಾಂತ ನಿಶ್ಚಯೂ ಮಾಡೀನಿ. ಎರಡು ಗ್ಯಾಲನ್ ಪೆಟ್ರೋಲು ಹಾಕೀನಿ ಈಗ ಟ್ಯಾಂಕನಾಗ. ರೋಡಿನ ಮ್ಯಾಲೆ ಟ್ರಯಲ್ ಹೋಗೋಣಾಂತ ಮಾಡೀನಿ. ನೀವೂ ಬರ್ತೀರೇನು?"

"ವಾಪಸ್ ಬರೋದು ಯಾವಾಗ?"

"ಎರಡೇ ಗಂಟೆಯೊಳಗೆ ಬಂದುಬಿಡ್ತೇವೆ. ಏಳು ಗಂಟೆಗೆಲ್ಲಾ ಬಂದೇ ತೀರಬೇಕು. ನಾನಿಲ್ಲದಿದ್ದರೆ ಹ್ಯಾಗೆ ಮತ್ತೆ?"

"ಹಾಗಾದರೆ ನಡೀರಿ ಮತ್ತೆ. ನೀವಾಗಿ ಕರೀತೀರಿ ಅಂದ್ರೆ ಹ್ಯಾಗೆ ಬರೋದಿಲ್ಲಾಂತ ಹೇಳೋದು. ವದರೀ ವದರೀ ಸಾಕಾಗೇದ; ಸ್ವಲ್ಪ ತಂಪಾದ ಗಾಳೀನಾದ್ರೂ ಬಡದ್ರೆ ಆರಾಮಾದೀತು" ಎಂದು ಕಾರಿನಲ್ಲಿ ಕುಮಾರಸ್ವಾಮಿ ಕೂತ. ಕಾಂತರಾಯನೂ ಸ್ಟೇರಿಂಗ್‌ನಲ್ಲಿ ಕೂತ ಬಳಿಕ ಕಾರು ವೇಗವಾಗಿ ಹೋಗಹತ್ತಿತು.

ಎರಡು ಮೈಲು ಹೋದ ನಂತರ ಕಾಂತರಾಯನು ಹರಟೆಗೆ ಆರಂಭಿಸಿದ. "ಅಲ್ಲರೀ ನಿಮ್ಮ ನೆನಪು ನನಗೆ ಚೆನ್ನಾಗಿದೆ. ನಾನು ಸಣ್ಣವನಿದ್ದಾಗ ನೀವು ವೇಷಹಾಕಿ, ಹೆಸರುವಾಸಿಯಾದ ನಟರೆಂತ ಮಾತು ಕೇಳಿದ್ದೆ. ಅದೇನು ಜನರ ಹುರುಪು ನಿಮ್ಮ ವೇಷಾ ನೋಡೋಕೆ. ನಿಮ್ಮ ಚಾತುರ್ಯ ಬಹಳ ಉತ್ತಮ ವರ್ಗದ್ದು."

"ಹಳೇ ಕಾಲ ಮತ್ತೆ ಬರ್‍ತಾವೇನ್ರಿ? ಆ ಕಾಲದಲ್ಲಿ ವಿದ್ಯೆ ಇದ್ದವನಿಗೆ ಹೆಸರು ಬಂದೇ ಬರ್‍ತಿತ್ತು. ಈ ಕಾಲದಾಗೇನು ಬೇಕು? ಯಾವುದೂ ಬೇಕಾಗಿಲ್ಲ. ಎಲ್ಲಾ ಹೊರಗಿನ ಥಳಕಿನಲ್ಲೇ ನಡೆದೇದ. ಒಂದು ಕಾಲದಾಗ, ಈ ನಾಯುಡು, ಸುಬ್ಬರಾಯ, ಸೂರ್‍ಯನಾರಾಯಣ ನಮಗೆ ಬೊಗ್ಗಿ ಬೊಗ್ಗಿ ನಮಸ್ಕಾರ ಮಾಡುವವರು. ಈಗ ನೋಡ್ರಿ ಎಂಥಾ ಶ್ರೀಮಂತರಂತಿದ್ದಾರೆ. ಕಾಲದ ಮಹಿಮೆ."

"ಏನು ಕಾಲನೋ, ಎಲ್ಲಾ ಕೆಟ್ಟ ಹೋಗೇದ. ಯಾರನ್ನೂ

ಅನ್ನುವ ಹಾಗೇ ಇಲ್ಲ. ಅದ್ಯಾಕೆ ನಾವು ಆಡೊ ನಾಟಕಾಂದ್ರೇನು? ಎಷ್ಟು ರೊಕ್ಕಾ? ಇದರೊಳಗೆಲ್ಲಿದೆ ಕಲೆ, ಉಪಾಸನೆ? ನನಗೆಲ್ಲಾ ಗೊತ್ತದೆ. ಈಗ ಬೇಕಾಗಿರೋದು ಜನಗಳಿಗೆ ಬರೇ ಹೊರಗಿನ ಆಡಂಬರ. ಹಿಂದಿನ ಕಾಲದ ಅಭಿರುಚಿ ಎಲ್ಲಾ ಹೋಗಿ ಬಿಟ್ಟದೆ.

"ಎಂಥಾ ಮಾತ್ರಿ, ಕಾಂತರಾಯರೆ. ನಿಮ್ಮ ಪರಿಚಯವಿಲ್ಲದಲೇ ನಾನು ಸುಮ್ಮನೇ ಅಪಾರ್ಥ ಮಾಡಿಕೊಂಡುದು ತಪ್ಪಾಯಿತು. ಒಬ್ಬರನ್ನೊಬ್ಬರು ಸರಿಯಾಗಿ ತಿಳಿದುಕೊಳ್ಳದೆ ಸುಳ್ಳು ನಿರ್ಣಯಕ್ಕೆ ಬರೋದು ತಪ್ಪು ನೋಡ್ರಿ."

ಆನಂತರ ಅರ್ಧ ಗಂಟೆಯು ವರೆಗೆ ಕಾರು ತನ್ನ ಹಾದಿಯನ್ನು ಹಿಡಿದಿದ್ದಿತು. ಯಾರೂ ಮಾತನಾಡಲೇ ಇಲ್ಲ.

"ಅದು ಟ್ರಂಕ್ ರಸ್ತೆ ಅಲ್ಲವಲ್ಲ ಕಾಂತರಾಯರೆ?"

"ಅಲ್ಲಾ, ಇದೇ ರಸ್ತೆ ಹಿಡಿದು ಬಿಟ್ಟೆ. ತಪ್ಪೇನಾಯಿತು? ಹೇಳ್ರಿ."

ಕಾಂತರಾಯನು ಬೇಕೆಂತಲೇ ದೊಡ್ಡ ರಸ್ತೆಯನ್ನೂ ಹಳ್ಳಿಗಳಿರುವ ದಾರಿಯನ್ನೂ ತಪ್ಪಿಸಿ ಕಾರನ್ನು ಸೀಳು ಮಾರ್ಗದಲ್ಲಿ ಒಯ್ಯುತ್ತಿದ್ದನು.

ಕತ್ತಲಾಗುತ್ತ ಬಂತು. ಒಂದು ಕಡೆ ಕೊರಕಲು ರಸ್ತೆಯಲ್ಲಿ ಕಾರು ಕೆಟ್ಟು ನಿಂತು ಬಿಟ್ಟಿತು. ಎಷ್ಟು ಪ್ರಯತ್ನ ಮಾಡಿದರೂ ಇಂಜನ್ ಸರಿ ಹೋಗಲೇ ಇಲ್ಲ. "ಏನಾಗಿದೆ? ಕಾರು ಸರಿ ಹೋಗೋದಿಲ್ಲೇನು" ಎಂದು ಕುಮಾರಸ್ವಾಮಿ ಕೇಳಿದ.

"ಪ್ಲಗ್‌ನಲ್ಲೇನೋ ಸ್ವಲ್ಪ ತಪ್ಪಿದೆ." ಎಂದು ಕಾಂತರಾಯನು ಕೆಳಗಿಳಿದು, ಬ್ಯಾನೆಟ್ ತೆಗೆದು ತಪ್ಪೆಲ್ಲಿದೆ ಎಂದು ಹುಡುಕ ತೊಡಗಿದ.

ಮತ್ತೊಂದು ಅರ್ಧ ಗಂಟೆ ಸಮಯ ಕಳೆದ ನಂತರ "ಏನ್ರೀ" ಕಾರೇನು ಸರಿ ಹೋಗ್ತದೋ, ಇಲ್ಲೋ? ಈಗಾಗಲೇ ಏಳು ಹೊಡೆದಂತೆ ಕಾಣುತ್ತದೆ" ಎಂದು ಪೇಚಾಡಿದ ಕುಮಾರಸ್ವಾಮಿ.

"ಛೇ. ಇನ್ನೇನು ಐದೇ ನಿಮಿಷ. ಅಲ್ಲಾ, ಹೀಗೆ ಕೆಟ್ಟುಹೋಗೋ ಕಾರು ತಗೊಂಡೇನ್ರೀ ಮಾಡೋದು?" ಎಂದು ಹೇಳಿ ಕಾಂತರಾಯನು ಪ್ಲಗ್ ರಿಪೇರಿ ನಡೆಸಿದ.

ಕುಮಾರಸ್ವಾಮಿಯು ಪೆಚ್ಚುಮೋರೆ ಹಾಕಿಕೊಂಡು ಸುಮ್ಮನೇ ನಿಂತುಬಿಟ್ಟ.

೧೯

ಎಂಟೂವರೆ ಯಾದರೂ ನಾಟಕದ ಸ್ಟೇಜಿನಲ್ಲಿ ನಾಯಕನ ಪಾತ್ರ ಮಾಡುವ ಕುಮಾರಸ್ವಾಮಿಯ ಸುಳಿವೇ ಇರಲಿಲ್ಲ. ಜನರೆಲ್ಲರೂ ಗುಂಪಾಗಿ ಸೇರಿದ್ದಾರೆ. ನಾಟಕದ ಹಾಲಿನ ಮುಂದೆ. ಪ್ರಭಾಕರ ನಾಗಲಿ ಕಾಂತರಾಯನಾಗಲಿ ಆ ಕಡೆ ಹಾಯಲೇ ಇಲ್ಲ. ಸತ್ಯನಾರಾ ಯಣರಾಯರು ಗಾಬರಿಯಾಗ ತೊಡಗಿದರು. ಇದೇನು ಬಂತೆಂದು ದಿಗಿಲಿನಿಂದ ಅಲ್ಲಿಂದಿಲ್ಲಿಗೆ ಓಡ್ಯಾಡ ಹತ್ತಿದರು. ಒಳಗಿನವರನ್ನು ವಿಚಾರಿ ಸಿದಾಗ, ಸಂಜೆ ಐದು ಗಂಟೆ ಸುಮಾರಿಗೆ ಕಾಂತರಾಯನೂ ಕುಮಾರ ಸ್ವಾಮಿಯೂ ಸಣ್ಣ ಕಾರಿನಲ್ಲಿ ಶಿಕಾರಿಗೆಂದು ಹೋದರೆಂಬ ವಿಷಯ ತಿಳಿದು ಬಂತು.

ಮುಂದೇನು ಮಾಡಬೇಕೆಂಬುವುದು ತಿಳಿಯದೇ ಕುಟುಂಬ ರಾಯರ ಮನೆಗೆ ಬಂದ. ಕಾಂತರಾಯನು ಬಂದಿದ್ದರೆ ಅವನೆಲ್ಲಿರುವ ನೆಂಬುವುದನ್ನು ತಿಳಿಯಲು ಅನುಕೂಲವೆಂದು ನೆನೆದು ರಾಯರು ಎದೆ ಗುದಿಯ ಮನಸ್ಸಿನಿಂದ "ನೋಡಪ್ಪಾ ಪ್ರಮಾದವಾಗಿ ಹೋಗಿದೆ. ಕುಮಾರಸ್ವಾಮಿಯ ಸುಳಿವೇ ಇಲ್ಲ. ಇಂಥವರನ್ನು ನಂಬಿದರೇ ಹೀಗೇನೆ. ನೀನೇ ಗತಿಯೆಂದರೆ ಮೇಲೇರಿ ಬಿಡ್ತಾರೆ. ಅಲ್ಲಾ, ನಾಟಕ ಇಲ್ಲಾಂತ ಹೇಳಿದರೆ ನಮ್ಮ ಮರ್ಯಾದೆ ಹೋಗ್ತದಲ್ಲ." ಎಂದು ಕುಟುಂಬರಾಯನ ಮುಂದೆ ಪೇಚಾಡಿದ.

ಕುಟುಂಬರಾಯರು, ಪ್ರಭಾಕರರು ಊಟಕ್ಕೆ ಕೂತಿದ್ದರು. ಸಲುಗೆ ಯಿಂದ ಅಡುಗೆ ಮನೆಯೊಳಗೆ ಬಂದಿದ್ದರು ರಾಯರು. ಕುಟುಂಬ ರಾಯನು "ಅಲ್ಲಿ ಮಣೇ ಮೇಲೆ ಕುಳಿತುಕೋ. ಊಟ ಮಾಡ್ತೀ ಯೇನು? ಇದೇನು ಹುಡುಗತನವೋ ನಾ ಕಾಣೆ. ಕಾಂತನು ರಾತ್ರಿ ಊಟಕ್ಕೆ ಬರೋದಿಲ್ಲಾಂತ ಹೇಳಿ ಹೋಗ್ಯಾನೆ. ಇನ್ನೇನು, ನಾವೂ ಊಟ ಮುಗಿಸಿ ನಾಟಕ ಮಂದಿರದ ಕಡೆ ಬರುವವರಿದ್ದೆವು." ಎಂದು ನಿಧಾನವಾಗಿ ಹೇಳಿದ ಮಾತಿನ ಸರಣಿ ಸತ್ಯನಾರಾಯಣರಾಯರಿಗೆ ಅರ್ಥ ವಾಗಲಿಲ್ಲ.

"ನಂದು ಊಟಾ ಆಗೇದ. ಅಲ್ಲಾ, ಈಗೇನು ಮಾಡಣಾಂತೀ? ಇದೇನು ಬಂತಪ್ಪ ಪೀಕಲಾಟ"

ಪ್ರಭಾಕರನು ತಲೆ ತಗ್ಗಿಸಿ ಇವರ ಮಾತಿನ ಕಡೆ ಲಕ್ಷ್ಯವಿಡದವನಂತೆ ನಟಿಸುತ್ತ ಊಟ ಮಾಡುತ್ತಿದ್ದನು.

"ಮಾಡೋದೇನೋ ನಾರಾಯಣ? ನಮ್ಮ ಕೈಲೇ ನಾಟಕಾ ಕಂಪೆನಿ ನಡೆಸೋದು ಆಗೋ ಮಾತಲ್ಲಾಂತ ಎಂದೋ ಸಿದ್ಧವಾಗೇದೆ. ಆತು; ಮಾರಿದ ತಿಕೀಟಿನ ರೊಕ್ಕಾ ಕೊಟ್ಟು ಬಿಟ್ಟು ನಾಟಕ ಮುಂದೆ ಹಾಕಲ್ಪಟ್ಟದೇಂತ ಬೋರ್ಡ ಹಚ್ಚಿ ದೀಪಾ ಆರಿಸಿದ್ರಾತು. ಹಿಂದೆ ಜನ ಬರಲಿಲ್ಲಾಂತ ನಾವೆಷ್ಟು ಸಲ ಮಾಡಿದ್ದಿಲ್ಲ?"

"ಅಲ್ಲೋ ಕುಟುಂಬ, ಅಷ್ಟೇಕೆ ನನ್ನ ಮೇಲೆ ಕೋಪ ನಿಂಗೆ ಅಂತೀನಿ " ಎಂದು ಹೇಳಿ ಅಲ್ಲಿದ್ದ ಮಣೆ ಮೇಲೆ ಕೂತ ರಾಯನು.

"ಕೋಪಾ ಇಲ್ಲದಿದ್ದರೆ ಮತ್ತೇನು? ಕಂಪೆನಿ ಹಾಳಾಗ್ತಾ ಇದ್ದರೂ ಸುಮ್ಮನೆ ಬಕಾಸುರರಂತೆ ನಮ್ಮ ರಕ್ತಾ ಹೀರೋಕೆ ಇದ್ದರೇ ಹೊರತು ಈ ಜನಾ, ಕಂಪೆನೀ ಉಳಿಸೋ ಉಪಾಯ ಯಾರೂ ಹೇಳಿಲ್ಲ. ನಮ್ಮ ಹುಡುಗರಿಬ್ಬರು, ಬಂದು ಏನೋ ಸ್ವಲ್ಪ ಎತ್ತುವ ಹಾಗೆ ಮಾಡೋ ಯತ್ನ ನಡೆಯಿಸಿ, ಇನ್ನೇನಪ್ಪ, ಕಷ್ಟಾ ತಪ್ಪಿತು, ಎಂಬ ಸ್ಥಿತಿಗೆ ಕಂಪೆನೀನ ತಂದಾಗ ನಡುವೆ ಮಾರೀಚನಂತೆ ನೀಬಂದು ಎಲ್ಲಾ ಕೆಡಸಿಬಿಟ್ಟೆ. ಅನುಭವಿಸಬೇಕು ಮತ್ತೆ. ಯಾವ ಧೈರ್ಯದಿಂದ ನೀನು ಪ್ರಭಾಕರನ ಬದಲು ಕುಮಾರಸ್ವಾಮಿಯನ್ನಾರಿಸಿದೆಯೋ ನನಗೇನು ಗೊತ್ತು?" ಎಂದು ಸ್ವಲ್ಪ ಕೋಪದಿಂದ ಹೇಳಿದ ಮಾತಿಗೆ ಸತ್ಯನಾರಾಯಣರಾಯನು ನಿಸ್ತೇಜನಾಗಿ ಕೈ ಜೋಡಿಸಿಕೊಂಡು, "ಮಹಾರಾಯ, ನಂದು ತಪ್ಪಾತು. ಗಲ್ಲಗಲ್ಲ ಬಡಕೋಈನಿ. ಬಿಡು ಆ ಮಾತು ಇನ್ನು. ಮತ್ತೆ ಹಿಚಿಕಬ್ಯಾಡ ನನ್ನ ಕುತ್ತಗೀನ. ಏನ್ರಪ್ಪಾ ಪ್ರಭಾಕರ್, ನೀವು ಕಲೆಗಾಗಿ ಕೆಲಸ ಮಾಡುವವರು. ಹೇಳ್ರಪ್ಪಾ, ನೀವೇನು ನಮ್ಮ ಕಂಪೆನ್ಯಾಗ ಮತ್ತೆ ಸೇರಿ ವೇಷಾ ಹಾಕ್ತಿರೋ, ಇಲ್ಲಾ ನಾ ಎಲ್ಲಾದರೂ ಈಗಿಂದೀಗಲೇ ಊರುಬಿಟ್ಟು ಓಡಿ ಹೋಗಲೋ. ನನ್ನ ಮಾನ, ಕಂಪೆನೀ ಮಾನ ಉಳಿಸ್ರಿ ಇಷ್ಟು".

ಪ್ರಭಾಕರನು ಯಾರ ಕಡೆಯೂ ನೋಡದಲೇ ಊಟ ಮುಗಿದು ದರಿಂದ ಏಳುತ್ತ "ಇನ್ನೇನು ಮಾಡೋದು, ಇವತ್ತು ಒಂದು ರಾತ್ರಿಗೆ ಬೇಕಾದರೆ ವೇಷಾ ಹಾಕ್ತೀನಿ. ಆ ಮ್ಯಾಲೆ ನಿಮ್ಮ ಕಂಪೆನಿ ಇದ್ರೇನು ಬಿಟ್ರೇನು'' ಎಂದು ಹೇಳುತ್ತ ಕೈತೊಳೆಯಲು ಹೊರಗೆ ಹೋದ.

ಮೂವರೂ ಸೇರಿ ನಾಟಕದ ಮಂದಿರದ ಹತ್ತಿರ ಬರುವ ಹೊತ್ತಿಗೆ ಒಂಭತ್ತು ಹೊಡೆದು ಹೋಗಿತ್ತು. ಈ ಗೊಂದಲ ಇನ್ನಿತರ ಜನರಿಗೆ ತಿಳಿದಿರಲಿಲ್ಲವಾದುದರಿಂದ ಪ್ರಭಾಕರನು ಬಂದೊಡನೆಯೇ ಬಣ್ಣಹಾಕಿ ಕೊಂಡ. ನಾಟಕವು ಸಕಾಲಕ್ಕೆ ಆರಂಭವಾಯಿತು. ಪ್ರಭಾಕರನು ಪಾತ್ರ ವಹಿಸಿದುದು ಜನರಿಗೆ ಬಹಳ ಆನಂದವೆನಿಸಿತು. ಕರತಾಡನದಿಂದ ಅವ ನನ್ನು ಮೆಚ್ಚಿಸಿದರು. ಮೂರನೇ ಅಂಕು ನಡೆಯುವ ಹೊತ್ತಿಗೆ ಕಾಂತ ರಾಯನೂ, ಕುಮಾರಸ್ವಾಮಿಯೊಂದಿಗೆ ನಾಟಕದ ಹಾಲಿಗೆ ಬಂದು ಅವನನ್ನು ಅಲ್ಲಿಳಿಸಿ ತಾನೊಬ್ಬನೇ ಕಾರಿನಲ್ಲಿ ಪ್ರಭಾಕರನು ಹೇಳಿದ ಸೂಚನೆಯಂತೆ ಅನಸೂಯಳ ಮನೆಯನ್ನು ಸೇರಿದ.

ಅಷ್ಟು ಹೊತ್ತಿನಲ್ಲಿ ಅನಸೂಯಳು ನಿದ್ರಿಸುತ್ತಿದ್ದಳು. ಆದರೆ ಕುಸುಮಳಿನ್ನೂ ಎಚ್ಚರದಿಂದಿದ್ದಳು. ಮನೆಯ ಬಾಗಿಲು ಯಾರೋ ಬಡಿದುದರಿಂದ, ಅನಸೂಯಳಿಗಾಗಿ ಯಾರೋ ಬಂದಿರಬೇಕೆಂದು ನೆನೆದು ಮಲಗಿದ ಅನಸೂಯಳನ್ನೆಬ್ಬಿಸಿದಳು. ಬಾಗಿಲುತೆಗೆದಾಗ ಕಾಂತರಾಯನು ಆಕೆಯನ್ನುದ್ದೇಶಿಸಿ "ಕುಸುಮಾದೇವಿ ಇರುವ ಮನೆ ಇದೇತಾನೆ".

"ನಿಮಗೇನು ಬೇಕು?''

"ಅವರೊಂದಿಗೆ ಮಾತನಾಡಬೇಕಾಗಿದೆ'' ಎಂದು ಹೇಳಿದ ಕಾಂತರಾಯನ ಧ್ವನಿಯು ಪರಿಚಯವಿದ್ದುದರಿಂದ ಕುಸುಮಳೂ ಬಾಗಲಿಗೆ ಬಂದು ಬಿಟ್ಟಳು. "ಕುಸುಮಾದೇವಿಯರೆ, ನನ್ನೊಂದಿಗೆ ಬರು ವಿರಾ?" ಎಂದು ವಿನಯದಿಂದ ಕೇಳಿದ.

ಕಾಂತರಾಯರ ಆ ವಿನಯದ ಕರೆಯಲ್ಲಿ ಭಾವೀ ಶುಭಸೂಚಕ ಚಿನ್ಹೆಗಳು ಕಂಡು ಬಂದವು. ಮೆಟ್ಟಲುಗಳನ್ನಿಳಿದು ಬಂದು ಕಾರಿನಲ್ಲಿ ಕೂತು ಇಬ್ಬರೂ ನಾಟಕ ಭವನದ ಕಡೆ ಹೊರಟರು. ಇದೇನು ವಿಚಿತ್ರ ವೋ, ಈಗೀನ ಕಾಲದ ಹುಡುಗರೇ ಹೀಗೆಂದು ನೆನೆದು ಬಾಗಿಲು ಹಾಕಿ ಕೊಂಡು ಮತ್ತೆ ಮಲಗಿದಳು ಅನಸೂಯೆ.

# ೨೦

ಕಾಂತ, ಕುಸುಮರಿಬ್ಬರೂ ನಾಟಕ ಮಂದಿರದ ಕಡೆ ಹೊರಟರು. ಹಾದಿಯಲ್ಲಿ ಕಾಂತನು "ಅಲ್ಲಾ ಕುಸುಮಾ, ಇದೇನು ಹುಚ್ಚು? ಅಷ್ಟೇಕೆ ಕೋಪ ಪ್ರಭಾಕರನ ಮೇಲೆ?" ಎಂದು ಕೇಳಿದನು.

ಕುಸುಮಳು ಸುಮ್ಮನಿದ್ದಳು.

"ಅವನ ಮೇಲಿನ್ನೂ ನಿನಗೆ ಕೋಪವಿದೆಯೆ?"

"ಇರುವುದು."

"ಅವನಂತಹ ದ್ರೋಹವೇನು ಮಾಡಿದ ನಿನಗೆ?"

"ನನಗಾದರೂ ದ್ರೋಹ ಮಾಡಿಲ್ಲ. ಅಂದೇಕೆ ಅವರು ವಿವರವಾಗಿ ಹೇಳಬಾರದಿತ್ತು? ಮಾತಿನ ಧೋರಣೆ ನೋಡಿದರೆ ನನ್ನ ಜನನದ ಬಗ್ಗೆ, ಶೀಲದ ಬಗ್ಗೆ ಅವರಿಗೆ ಅಸಹ್ಯವಿದ್ದಂತೆ ತಿಳಿದು ಬಂತು. ಅಂತಹ ಸ್ಥಿತಿಯಲ್ಲಿ ನಾನು ಮಾಡುವುದಾದರೂ ಏನು? ನೀವೇ ಹೇಳಿ ಮತ್ತೆ"

"ಗುಡ್ ಗರ್ಲ್, ಹಾಗೆ ಬಾ ಹಾದಿಗೆ. ಅವನೆಲ್ಲಾ ಹೇಳ್ತಾನೆ"

ಹೀಗೆ ಅವರು ಮಾತು ಮುಗಿಸುವ ಹೊತ್ತಿಗೆ ನಾಟಕದ ಮಂದಿರದ ಹತ್ತಿರ ಬಂದರು. ಆಗ ಕಡೆಯ ಪ್ರವೇಶ ನಡೆದಿತ್ತು. ಇಬ್ಬರೂ ಒಳಗೆ ಹೋಗಿ ಸೈಡ್‌ವಿಂಗದ ಹತ್ತಿರ ನಿಂತರು. ಪ್ರಭಾಕರನು ರಂಗಭೂಮಿಯಲ್ಲಿದ್ದನು. ಈ ಕಡೆ ತಿರುಗಿ ನೋಡಿದ. ಸ್ವಲ್ಪ ಸಮಾಧಾನವೆನಿಸಿತು. ಕಡೆಯ ಪ್ರವೇಶ ಉತ್ತಮ ರೀತಿಯಲ್ಲಿ ಕೊನೆಗೊಂಡಿತು. ಜನರು ಪ್ರಭಾಕರನ ಕಡೆಯ ಹಾಡನ್ನು ಮತ್ತೆ ಹೇಳಬೇಕೆಂದು ಗೊಂದಲ ಹಾಕಿದರು. ಅವರ ಅಭೀಷ್ಟದಂತೆ ಮನದಣಿಯ ಹಾಡಿದ.

ಕಡೆಯ ಪ್ರವೇಶ ನಡೆಯುತ್ತಿರುವಾಗ ಕಾಂತ–ಕುಸುಮರಿಬ್ಬರೂ ಸೈಡ್—ವಿಂಗ್ಸನಲ್ಲಿ ನಿಂತಿರುವಾಗ "ಕುಸುಮಾ" ಎಂದು ಯಾರೋ ಕರೆದಂತಾಯಿತು. ನೋಡಿದರೆ ಸತ್ಯನಾರಾಯಣರಾಯರು. ಕುಸುಮಳಿಗೆ ಅವನ ಸುಟ್ಟ ಮುಖವನ್ನು ನೋಡಲು ಮನಸ್ಸಿರಲಿಲ್ಲ. ಆದರೂ ರಾಯರು ಸುಮ್ಮನಿರದೆ ಅವರ ಹತ್ತಿರಬಂದು "ನೀವಿಬ್ಬರೂ ಸ್ವಲ್ಪ ಸ್ಪೆಷಲ್ ಗ್ರೀನ್ ರೂಮಿನ ವರೆಗೆ ಬರಬೇಕು. ಅವಸರದ ಕೆಲಸವಿದೆ. ನಿನ್ನೆದುರಿಗೆ ಕುಸುಮಳಿಗೊಂದು ಮಾತು ಹೇಳಬೇಕಾಗಿದೆ". ಎಂದು

ಒತ್ತಾಯ ಮಾಡಿದ. ಕಾಂತರಾಯನೂ ಬಲವಂತ ಪಡಿಸಿದುದರಿಂದ ರೂಮಿಗೆ ಹೋಗಿ ಬಾಗಿಲನ್ನು ಮುಚ್ಚಿ "ಏನದು ವಿಶೇಷ?" ಎಂದು ಕಾಂತರಾಯನು ಸತ್ಯನಾರಾಯಣರಾಯನನ್ನು ಕೇಳಿದ.

"ಕುಸುಮಾ, ನನ್ನದು ಮಹಾಪರಾಧವಾಯಿತು. ನನ್ನನ್ನು ಮದುವೆಯಾಗೆಂದು ಕೇಳಿದುದು ತಪ್ಪು; ಮಹಾತಪ್ಪು. ನನಗೆ ಮತಿಭ್ರಮೆ ಯಾಗಿದ್ದಿತು. ನಿನಗೆ ಕೋಪ ಬರುವಂತೆ ಮಾತನಾಡಿದೆ. ನಿನ್ನೆದುರು ಮದುವೆಯ ಮಾತನ್ನೆತ್ತಿ ದುಃಖಪಡಿಸಿದುದಕ್ಕೆ ನನಗೆ ಕಷ್ಟವೆನಿಸುತ್ತದೆ. ನಾನೇನು ಮಾಡಿದರೆ ನಿನ್ನ ಕೋಪ ಶಾಂತವಾಗುವುದು ಹೇಳು? ನಿನಗಾಗಿ ಏನನ್ನಾದರೂ ಮಾಡಲು ಸಿದ್ಧನಿರುವೆನು"

"ನನ್ನನ್ನೇತಕ್ಕೆ ಕೇಳುತ್ತೀರಿ; ನೀವು ನನಗೆಲ್ಲಿ ಅನ್ಯಾಯಮಾಡಿ ರುವಿರಿ? ನಾನೇನು ಹಾಗೆ ಹೇಳಲಿಲ್ಲವಲ್ಲ? ಅನ್ಯಾಯ ಯಾರಿಗೆ ಮಾಡಿ ರುವಿರೋ ಅವರನ್ನೇ ಕೇಳಿರಿ. ಪಾಪದ ಪರಿಹಾರದ ಹಾದಿ ಅವರೇ ಹೇಳುವರು." ಎಂದು ಹೇಳಿದಳು ಕುಸುಮ ಸ್ವಲ್ಪ ಕೋಪದಿಂದಲೇ.

"ಆ ಮಹಾರಾಯ ನನ್ನನ್ನು ಕ್ಷಮಿಸಲಾರ. ಇವತ್ತೊಂದು ದಿನ ವೇಷಹಾಕುವೆನೆಂದು ಮಾತ್ರ ಹೇಳಿರುವನು. ನಮ್ಮ ಕಂಪೆನಿಯಲ್ಲಿ ಕೆಲಸ ಮಾಡುವುದಿಲ್ಲವಂತೆ. ನೀನಾದರೂ ಸ್ವಲ್ಪ ಹೇಳಬಾರದೆ?"

"ಕೇಳೋ ರೀತಿಯಲ್ಲಿ ಕೇಳಿದರೆ ಅವರೊಪ್ಪಬಹುದು."

"ಹಾಗಾದರೆ ನಿನ್ನೆದುರಿನಲ್ಲಿಯೇ ಕೇಳುತ್ತೇನೆ, ನೋಡು. ಕಾಂತ ಅದೇನು ಗಲಾಟೆ? ನಾಟಕ ಮುಗೀತೂಂತ ಕಾಣುತ್ತದೆ. ಸ್ವಲ್ಪ ಪ್ರಭಾ ಕರನ್ನು ಇಲ್ಲಿಗೆ ಕರೆದುಕೊಂಡು ಬಾ" ಎಂದು ಹೇಳುವ ಹೊತ್ತಿಗೆ ಪ್ರಭಾ ಕರನೂ ಅಲ್ಲಿಗೆ ಬಂದುಬಿಟ್ಟ.

ಸತ್ಯನಾರಾಯಣರಾಯನು ಅವನನ್ನು ಕೈಸನ್ನೆಯಿಂದ ಬರಮಾಡಿ ಕೊಳ್ಳುತ್ತ, "ಪ್ರಭಾಕರ, ನಿಮ್ಮಿಬ್ಬರ ಎದುರಿನಲ್ಲಿ ಬಹಳ ದೈನ್ಯದಿಂದ ಕೇಳಿಕೊಳ್ಳುತ್ತೇನೆ. ವಯಸ್ಸಾಯಿತು. ಅರಿವು ಮರೆವಿನಿಂದ ತಪ್ಪಿನಡೆ ದುಕೊಂಡೆ. ಮದುವೆಯ ಮಾತು ಎತ್ತಬಾರದಾಗಿತ್ತು. ಕೆಟ್ಟ ಸಮಯ ಮಾಡುವುದೇನು?ಏನೋ ತಿಳಿಯದೆ ನಿಮ್ಮನ್ನು ಹೋಗೆಂದು ಹೇಳಿದುದು ತಪ್ಪಾಯಿತು. ಮತ್ತೆ ನಮ್ಮಲ್ಲಿಯೇ ನಿಂತು, ಕೈಕೊಂಡ ಕೆಲಸ

ಪೂರೈಸಲಾರಿರಾ? ನೀವು ಒಪ್ಪಲೇಬೇಕು, ಪ್ರಭಾಕರ್, ಪ್ರಭಾಕರ್''

"ನೀವು ಹೋಗೆಂದುದರಿಂದ ನಾನು ಬಿಡಲಿಲ್ಲನಲ್ಲ''

"ನಿಮಗೆ ನನ್ನ ಮೇಲೆ ಕೋಪವಿಲ್ಲವಷ್ಟೆ?"

''ಇಲ್ಲ ರಾಯರೆ.''

"ಹಾಗಾದರೆ ನೀವು ನಮ್ಮ ಕಂಪೆನಿಯಲ್ಲಿರುವೆ ಎಂದ ಹಾಯಿತು?"

''ಹಾಗಾಗುವುದು ಅಶಕ್ಯ"

''ಏತಕ್ಕೆ?

''ಆದರ ಕಾರಣ ಸವಿಸ್ತಾರವಾಗಿ ಅಂದೇ ಹೇಳಿದೆನಲ್ಲ. ನೀವು ಮರೆತಿರುವಿರಿ"

''ನನಗೆ ನೆನಪಿಲ್ಲ. ಇರಲಿ ಮತ್ತೆ ಹೇಳಿ ಬಿಡ್ರಿ; ಆದರಲ್ಲೇನಿದೆ?

ಪ್ರಭಾಕರನು ಮಾತನಾಡಲಿಲ್ಲ. ಕುಸುಮಳಿದ್ದೆಡೆಗೆ ನೋಡಿದ. ಆ ನೋಟದಲ್ಲಿ ಅಡಗಿಕೊಂಡ ವಿಶೇಷ ಸೂಚನೆ ಏನೆಂಬುವುದು ಸತ್ಯನಾರಾಯಣರಾಯನಿಗೆ ತಿಳಿದಿತ್ತು. ''ಕುಸುಮಾ, ನೀನೇಕೆ ನಮ್ಮ ಕಂಪೆನಿಯಲ್ಲಿ ಸೇರಿ ವೇಷ ಹಾಕಬಾರದು. ನೀನೊಪ್ಪಿದರೆ ಎಲ್ಲವೂ ಸರಿ ಹೋಗುತ್ತದೆ ಎಂದು ಹೇಳಿದ ಸತ್ಯನಾರಾಯಣರಾಯನ ಮಾತಿನಲ್ಲಿ ಭಯದ ಸೂಚನೆ ಇತ್ತು. ಎಲ್ಲಿ ತನ್ನ ಮಾತಿನಲ್ಲಿ ತಪ್ಪು ಕಂಡು ಹಿಡಿದು ತನ್ನನ್ನು ಪೀಡಿಸುವಳೋ ಎಂಬ ಅನುಮಾನ ಆವನನ್ನು ಪೀಡಿಸುತ್ತ ಲಿತ್ತು. ಅಂತೂ ಧೈರ್ಯಮಾಡಿ ಹೇಳಿದ ಇವನ ಮಾತುಗಳಿಗೆ ಕುಸುಮಳು, "ಈ ಆಲೋಚನೆ ನಿಮಗಾರು ಹೇಳಿದರು?" ಎಂದು ಕೇಳಿದಳು.

ಪ್ರಭಾಕರನು ಮತ್ತೆ ಕುಸುಮಳ ಕಡೆ ನೋಡಿದ. ಅವನಿಗೂ ಹೆಚ್ಚು ಮಾತನಾಡಲು ಧೈರ್ಯವಿರಲಿಲ್ಲ.

''ನಮ್ಮ ಪ್ರಭಾಕರರೇ, ಅವರು ಕಂಪೆನಿಯಲ್ಲಿದ್ದರೆ, ನೀನು ವೇಷ ಹಾಕುವುದಿಲ್ಲವೆಂದು ಯೋಚಿಸಿ ನಿನಗಾಗಿ ಅವರು ರಾಜೀನಾಮೆ ಕೊಡಬೇಕೆಂದಿದ್ದರು; ಅಲ್ಲೇನ್ರಿ ಪ್ರಭಾಕರ?'' ಎಂದು ರಾಯನು ನಡುವೆ ಮಾತನಾಡಿದ.

ಮತ್ತೆ ಮೂರನೆಯಸಲ ಪ್ರಭಾಕರ ಕುಸುಮಳ ಕಡೆ ನೋಡಿದ.

ಸ್ವಲ್ಪ ಸಿಟ್ಟಿಗೆದ್ದು "ಅಲ್ಲಾ, ನೀವೀ ಕಂಪೆನಿ ಬಿಟ್ಟರೆ ನಾನು ಪಾರ್ಟು ಮಾಡುವೆನೆಂದು ಹೇಳಿದೆನೇ" ಎಂದು ಪ್ರಭಾಕರನನ್ನು ಕುಸುಮಳು ಕೇಳಿದಳು.

ಪ್ರಭಾಕರನು ಸುಮ್ಮನಿರುವುದು ಒಳಿತಲ್ಲವೆಂದು ತಿಳಿದು "ನೀನಾ ರೀತಿ ಹೇಳಿದೆಯೆಂದು ನಾನೆಲ್ಲಿ ಸೂಚಿಸಿದೆ? ನಾನೀ ಕಂಪೆನಿಯಲ್ಲಿರುವುದರಿಂದ ನೀನು ಪಾರ್ಟು ಮಾಡಲು ಸಂಕೋಚಿಸಿದರೆ, ನಾನು ಇಲ್ಲಿಂದ ದೂರಾಗುವೆನೆಂದು ಹೇಳಿದೆನೇ ಹೊರತು, ಬೇರೆ ಯಾವ ಮಾತೂ ಆಡಲಿಲ್ಲ. ಈಗಲಾದರೂ ಸಂದೇಹ ಪರಿಹಾರವಾಯಿತೆ? ಪಾಪ, ರಾಯರ ಮೇಲೆ ನಿನಗೇಕೆ ಕೋಪ?" ಎಂದು ವಿವರಿಸಿದ.

"ಈ ಪರತಿನ ಮೇಲೆ ನಾನು ವೇಷಾ ಹಾಕೋದಿಲ್ಲ" ಎಂದು ಹೇಳಿದಳು ಕುಸುಮಳು ದರ್ಪದಿಂದ.

"ಹಗೂರಾಯಿತು. ಮುಖ್ಯ ನಾನು ಬದುಕಿದೆ. ರಾಯರೆ, ನಾನೇ ನಿಂತು ಬಿಡುತ್ತೇನೆ, ನಿಮ್ಮ ಕಂಪೆನಿಯಲ್ಲಿ. ಇನ್ನೇನು?"

"ನೀವು ಈ ಕಂಪೆನಿಯಲ್ಲಿದ್ದರೆ, ನಾನು ವೇಷ ಹಾಕುವುದಿಲ್ಲವೆಂದು ಎಲ್ಲಿ ಹೇಳಿದೆ? ನಾನೂ ಪಾರ್ಟು ಮಾಡಬಹುದು" ಎಂದು ವಿನೋದದಿಂದ ಕುಸುಮಳು ಹೇಳಿದಳು.

"ನಿಜವಾಗಿ!" ಎಂದು ಪ್ರಭಾಕರನು ನುಡಿದು, ಕುಸುಮಳನ್ನು ದುರದುರನೆ ನೋಡ ಹತ್ತಿದ.

"ಇನ್ನೇನು. ನನ್ನ ಸಂಕಟ ಪರಿಹಾರವಾದಂತಾಯಿತು. ನೀವಿಬ್ಬರೂ ಕಂಪೆನಿಯಲ್ಲಿದ್ದರೆ, ನನಗೂ ಅನುಕೂಲ. ವೇಷ ಹಾಕಿದ್ರೆ ಹಾಕ್ರಿ, ಬಿಟ್ಟರೇ ಬಿಡ್ರಿ. ಸುಮ್ಮನೇ ಇದ್ದು ಎಲ್ಲಾ ನೋಡಿ ಕೊಂಡು ಹೋದ್ರೆ ನನಗೆ ಸಮಾಧಾನ. ಮುಳುಗೋ ಕಂಪೆನೀನ ಎತ್ತಿ ಹಿಡಿದ ನಿಮ್ಮ ಸಹಾಯ ಮರೆಯಲಾರೆ. ಅಬ್ಬ, ಸಾಕಾಯಿತಪ್ಪ! ಎಲ್ಲಿ ಕುಟುಂಬ ರಾಯ?" ಎಂದು ಹೇಳುತ್ತ ಹೊರಗೆ ಹೋಗಿ ಬಿಟ್ಟ.

ಪ್ರಭಾಕರನು, ಕಾಂತನು, ಕುಸುಮ, ಕುಟುಂಬ ರಾಯರ ಮನೆಗೆ ಹೋದರು. ಆಗ ರಾತ್ರಿ ಎರಡು ಗಂಟೆ ಸಮಯ.

೨೧

ಮನೆಗೆ ಬಂದು ಮಲಗುವ ಹೊತ್ತಿಗೆ ರಾತ್ರಿ ಮೂರು ಹೊಡೆಯಿತು. ಎಲ್ಲರೂ ಮಲಗಿದರು. ಪ್ರಭಾಕರನಿಗೆ ನಿದ್ದೆ ಬರಲಿಲ್ಲ ಸ್ವಲ್ಪ ಸಮಯದ ನಂತರ ಕುಸುಮಳು ಬೆಳುದಿಂಗಳಲ್ಲಿ ಒಬ್ಬಳೇ ನಿಂತು ಯೋಚಿಸುತ್ತಿರುವುದನ್ನು ಮಲಗಿದಲ್ಲಿಂದಲೇ ಪ್ರಭಾಕರನು ನೋಡಿದ. ಆವಳಿದ್ದೆಡೆಗೆ ಹೋಗಲು ಕುಸುಮಳು ನಗುತ್ತ "ಏಕೆ, ನಿಮಗೂ ನಿದ್ದೆ ಬರಲಿಲ್ಲವೇನು?" ಎಂದು ಕೇಳಿದಳು.

"ಅಹುದು, ದೊಡ್ಡ ಯೋಚನೆಯಲ್ಲಿ ಬಿದ್ದಿದ್ದೇನೆ."

"ಇನ್ನೂ ನಿಮ್ಮ ಅನುಮಾನ ಬಗೆಹರೆಯಲಿಲ್ಲವೇನು? ಮಹಾರಾಯರಪ್ಪಾ ನೀವು. ನಿಮ್ಮನ್ನು................"

"ಅದಲ್ಲ ಕುಸುಮ. ನೀನು ಬಹಳ ಅವಸರ ಪ್ರಕೃತಿಯವಳು ನೋಡು. ನಮ್ಮ ವಿಚಾರ ಅಂತೂ ಬಗೆಹರಿದಂತಾಯಿತು. ಇನ್ನೆರಡು ದಿನಗಳಲ್ಲಿ ನಮ್ಮ ಮದುವೆ ಬಹಿರಂಗವಾಗಿ ನಡೆಯಿಸುವೆವೆಂದು ಕುಟುಂಬ ರಾಯರು ನಿರ್ಧರಿಸಿರುವರು. ನಾಟಕದ ಹಾಲಿನಿಂದ ಬಂದಾಗ ಆವರು ಹೇಳಿದ ನಿರ್ಧಾರ ನೀನು ಕೇಳಲಿಲ್ಲವೇನು? ಇವರ ಮನೆಯಲ್ಲಿಯೇ ನಮ್ಮ ಮದುವೆಯಂತೆ. ನಡೆಯಲಿ. ಆದರೆ ನನ್ನ ಈಗಿನ ಯೋಚನೆ ಸದ್ಯದ ವಿಷಯದ ಬಗ್ಗೆ ಅಲ್ಲ. ನಮ್ಮ ಮಕ್ಕಳ ಗತಿಯೇನು? ಇಲ್ಲಿಗೆ ಬಂದಾಗಿನಿಂದ ಅದೇ ಯೋಚನೆಯಲ್ಲಿದ್ದೇನೆ. ನೋಡಿ, ನೋಡಿ ನಾವೇನೆಂದು ಮಕ್ಕಳನ್ನು ಹಡೆಯಬೇಕು, ಹೇಳು ಕುಸುಮಾ?" ಎಂದು ಕೇಳಿದ ಪ್ರಭಾಕರ.

"ಏಕೆ? ಆದರಲ್ಲೇನು ತೊಂದರೆ?"

"ಅವರೆಲ್ಲರೂ ಕುಲವಿಲ್ಲದ ಮಕ್ಕಳಾಗುವರಲ್ಲವೆ? ಅನೇಕ ತೊಂದರೆಗಳನ್ನೂ ಅನುಭವಿಸಬೇಕಾಗುವುದು ನಿನ್ನಂತೆ".

"ಆದೇಕೆ? ಯಾವ ಕಾರಣದಿಂದ?"

"ನೀನೇ ನೋಡುವೆಯಂತೆ. ಇಲ್ಲಿಯ ವರೆವಿಗೂ ನೀನು ಅನುಭವಿಸಲಿಲ್ಲವೆ?"

"ಈಗೇಕೆ ಆ ಯೋಚನೆ? ಸುಮ್ಮನೆ ಇದ್ದುಬಿಡಿ ನನಗೆ ಕೋಪಾ

ಬರುತ್ತೆ. ನೋಡಿ, ನನ್ನ ವಿಷಯ ಮತ್ತೇನಾದರೂ ಮಾತನಾಡಿದರೆ. ನನ್ನಂಥ ಅದೃಷ್ಟವಂತಳು ಯಾರಿರುವರು ಹೇಳಿ ಈಗ?''

"ಅಂಥಾ ಅದೃಷ್ಟದ ಕೆಲಸವೇನಾಯಿತು ಕುಸುಮಾ? ಆದರೆ ಯೋಚಿಸಿ ನೋಡು. ನಮ್ಮ ಮುಂದೆ ಬಹುದೊಡ್ಡ ಸಮಸ್ಯೆ ಇದೆ. ಇನ್ನು ನಮ್ಮ ಮುಂದೆ ಬಹು ಕಷ್ಟತರವಾದ ಸಮಸ್ಯೆ ಬಂದು ನಿಲ್ಲುವುದು. ಅದರ ಪರಿಹಾರ ಮುಂದಾಗಿ ಯೋಚಿಸಬೇಕಾಗುವುದು."

"ಅದೇನದು? ನೀವಾಡುವ ಮಾತುಗಳು ಸ್ಪಷ್ಟವಾಗಿಲ್ಲ. ನಾವಿಬ್ಬರೇ ಈ ಸಮಸ್ಯೆಯನ್ನು ಬಗೆಹರಿಯಿಸುವ. ನೀವೀ ರೀತಿ ಮಾತಾಡುವಿರೆಂದು ನಾನು ಮೊದಲೆ ನೆನೆದಿದ್ದೆ. ನಮ್ಮಿಬ್ಬರ ಮಿಲನದಿಂದ ಒಂದು ವಿಶಿಷ್ಟ ಜನಾಂಗವನ್ನೇ ನಿರ್ಮಿಸುವ. ಈ ಸೂಳೆಯ ವೃತ್ತಿಯನ್ನು ಮಾಡುವ ಕುಲವನ್ನೇ ನಿರ್ಮೂಲ ಮಾಡುವ. ದೇವದಾಸಿಗಳೆಂದೂ, ಪ್ರೇಮದಾಸಿಗಳೆಂದೂ ಕಳಾವಂತರೆಂದೂ ಬಸವಿ ಕುಲದವರೆಂದೂ ಎನಿಸಿಕೊಳ್ಳುವ ಈ ಜನರನ್ನು ಸುಧಾರಿಸುವ ಯೋಚನೆ ಕೈಕೊಳ್ಳುವ-''

"ನಮ್ಮಿಬ್ಬರಿಂದ ಇದು ಹೇಗೆ ಸಾಧಿಸುವುದು ಕುಸುಮಾ?''

"ನಾನಾಗಲೇ ಹೇಳಲಿಲ್ಲವೇ ಈ ಯೋಜನೆಯ ವಿವರಗಳೆಲ್ಲವನ್ನೂ ಯೋಚಿಸಿರುವೆನೆಂದು. ನಾಟಕ ಕಂಪೆನಿಯಿಂದಲೇ ಸಮಾಜವನ್ನು ಸುಧಾರಿಸುವ ಕೆಲಸ ಕೈಕೊಳ್ಳುವ. ಇಂಥಹ ನೀತಿದಾಯಕ ನಾಟಕಗಳನ್ನು ಬರೆದು ಕೊಡಲು ನಮ್ಮ ಕಾಂತರಾಯರಿರುವರು. ನಮ್ಮ ನಾಟಕಗಳನ್ನು ಕೇವಲ ನಗರಗಳಲ್ಲಿಯೇ ಅಲ್ಲದೆ, ವಾರಕ್ಕೊಂದು ಸಲ ಸ್ವಲ್ಪ ದೂರದ ಹಳ್ಳಿಗಳಿಗೆ ಹೋಗಿ ಬಯಲಿನಲ್ಲಿ ನಾಟಕವಾಡುವ. ಇದಕ್ಕನುಗುಣವಾದ ನಾಟಕಗಳನ್ನೂ ಬರೆದು ಪ್ರದರ್ಶನ ಮಾಡಿದಲ್ಲಿ ಜನರು ನಮ್ಮವರಾಗುವರು; ಸುಧಾರಿಸುವರು''.

''ಇದೆಲ್ಲಾದರೂ ಸಾಧ್ಯವೆ? ನಮಗನುಕೂಲವಾಗುವುದೆ? ಸರಕಾರದ ನೆರವು ಬೇಕಲ್ಲವೆ, ಕುಸುಮಾ?''

"ಸರಕಾರದ ನೆರವು ಈಗಾಗಲೇ ದೊರೆತಿರುವುದು. ದೊಡ್ಡ ದೊಡ್ಡ ನಗರಗಳಲ್ಲಿ 'ಸೂಳೆಯರ ಕಾಯದೆ' ಜಾರಿಯಲ್ಲಿ ಬಂದಿದೆ ಅಲ್ಲವೆ?"

"ಕಾನೂನು ಕಾಗದದಲ್ಲಿದೆ. ಕಾನೂನು ಪಾಲಿಸಲು ಜನರು ಮುಂದೆ ಬರಬೇಕು. ಈಗಾಗಲೇ ನಡೆದ ಒತ್ತಾಯದ ಶಿಕ್ಷಣದಿಂದ ಪ್ರತಿ ಹಳ್ಳಿಯೂ ಅಕ್ಷರಸ್ಥರಾದರೆಂದರೆ ನಮ್ಮ ಕಾರ್ಯವು ಅರ್ಧ ಕೈಗೂಡಿದಂತೆ. ಮುಂದೆ ನಮ್ಮ ರಂಗಭೂಮಿಯ ಸೇವೆಯಿಂದ ಜನ ಜನರನ್ನು ಹೆಚ್ಚು ಸುಧಾರಿಸಬಹುದೆಂದು ನಿನ್ನ ಯೋಜನೆ ಅಲ್ಲವೆ ಕುಸುಮಾ?''

"ಈಗ ತಿಳಿಯ ಹತ್ತಿತಲ್ಲವೆ? ಏಕೆ, ಇಷ್ಟು ದಿನ ನೀವು ಕಣ್ಣು ಮುಚ್ಚಿ ಕುಳಿತಿದ್ದಿರೇನು? ಪ್ರತಿ ನಗರದಲ್ಲಿಯೂ, ಬೇರೆ ರೀತಿಯ ಜನಾಂಗವು ಈಗ ತಲೆದೋರಹತ್ತಿದೆ. ಅನೇಕ ಮನೆತನಗಳು ಸುಧಾರಿಸಹತ್ತಿರುವವು. ದೂರದೇಶದಲ್ಲಿ, ಯುದ್ಧದಲ್ಲಿ ಹೋರಾಡಿ ಬಂದು ಹಿಂದೂದೇಶದ ರಕ್ಷಣೆಗೆಂದು ಬದ್ಧಕಂಕಣರಾಗಿ ನಿಂತಿದ್ದ ಅಜಾದ್ ಹಿಂದೂ ಫೌಜಿನ ಜನರಾರು? ಈ ಜನಾಂಗವೆಲ್ಲಿಯದು? ಇದರಲ್ಲಿ ಜಾತಿ ಮತವೆಲ್ಲಿರುವುದು? ಈಗ ನಮ್ಮ ಸ್ವತಂತ್ರ ಹಿಂದೂಸ್ಥಾನದಲ್ಲಿ ಸೈನ್ಯದಲ್ಲಿ ಸೇರಿ ನಮ್ಮ ದೇಶವನ್ನು ಕಾಪಾಡುವ ಕರ್ತವ್ಯ ನಮ್ಮೆಲ್ಲರದಲ್ಲವೆ? ನಮ್ಮ ಭಾರತ ಭೂಮಿ ಬಲಗೊಂಡು ಜಗತ್ತಿನಲ್ಲಿ ಹೆಸರು ಪಡೆಯಬೇಕೆಂದು ನಮ್ಮೆಲ್ಲರ ಆಶೆಯಲ್ಲವೆ? ಈಗ ಪ್ರಪಂಚದಲ್ಲಿ ಉಳಿದಿರುವುದು ಎರಡೇ ಜಾತಿ ಗಂಡು, ಹೆಣ್ಣು. ನಮ್ಮ ಪವಿತ್ರ ಹಿಂದೂಸ್ಥಾನದಲ್ಲಿ ಈಗ ತಲೆದೋರುತ್ತಿರುವ ಇಂಥಾ ಜನಾಂಗದ ನಿರ್ಮಾಣವು ನಮಗನುಕೂಲವಲ್ಲವೇ? ಈ ಸುಸಮಯದಲ್ಲಿ ನಮ್ಮ ಸುತ್ತ ಮುತ್ತಲಿನ ಸಮಾಜವನ್ನು ಸುಧಾರಿಸಿದರೆ ಉತ್ತಮ ಕೆಲಸವಾಗುದಿಲ್ಲವೆ? ಇದನ್ನು ಸಾಧಿಸಲು ರಂಗಭೂಮಿಯು, ನಾಟಕ ಕಲೆಯು ಹೆಚ್ಚು ಸಹಾಯ ಮಾಡುವುದಿಲ್ಲವೆ? ಹಿಂದೂಸ್ಥಾನದ ಸ್ವತಂತ್ರಸೈನ್ಯನಿರ್ಮಾಣದಲ್ಲಿ ತಮ್ಮ ಜನಾಂಗದ ಸಹಾಯವೂ ಬೇಡವೆ? ಊರು ಊರುಗಳಲ್ಲಿ ನಾವು ನೋಡುವುದಿಲ್ಲವೇ? ಹಿಂದಿನ ಶತಮಾನದಲ್ಲಿ ಕಂಡುಬಂದ ಸೂಳೆಯರ ಬೀದಿಗಳೆಲ್ಲಿರುವವು? ದೇವಾಲಯಗಳಲ್ಲಿದ್ದ ನಗರದಲ್ಲಿಯ ದೇವದಾಸಿಯರ ತಳುಕು ಬೆಳಕಿನ ಮನೆತನಗಳೆಲ್ಲಿ ಹೋದವು? ವಿಲಾಸ ಸ್ತ್ರೀಯರ ಮನೆತನಗಳೆಲ್ಲವೂ ಕುಲೀನ ಮನೆತನಗಳೆಂದೆನಿಸಿಕೊಂಡು ಸಂಸಾರಿಗಳಾಗಿ ಜೀವಿಸುವುದು ನಿಮಗೆ

ಕಂಡುಬಂದಿಲ್ಲವೆ? ಈ ಸಂಧಿಕಾಲ ನಮಗನುಕೂಲವಾದುದು. ಸರಿಯಾಗಿ ಯೋಚಿಸಿದಲ್ಲಿ ನಮ್ಮ ಕಲೆಯ ಸದುಪಯೋಗದಿಂದ........''

"ಹೌದು ಕುಸುಮಾ, ನಮ್ಮ ಕಂಪೆನಿಯ ಒಡೆಯರು ಇದಕ್ಕೊಪ್ಪುವರೆ? ಕಾಂತನ ಅಭಿಪ್ರಾಯವೇನೋ?"

"ಅದರ ಗೊಡವೆ ನಿಮಗೇಕೆ? ಈ ನನ್ನ ಯೋಜನೆ ಫಲಿಸುವುದೆ, ಇಲ್ಲವೆ, ಎಂಬುವುದರ ಬಗ್ಗೆ ನಿಮ್ಮ ಅಭಿಪ್ರಾಯ ಮಾತ್ರ ಹೇಳಿ ಬಿಡಿ. ಕಾಂತರಾಯರೂ ಇದಕ್ಕೆ ಒಪ್ಪುವೆನೆಂದು ನಾನು ಕಾರಿನಲ್ಲಿ ಬರುವಾಗ ಸೂಕ್ಷ್ಮವಾಗಿ ಹೇಳಿರುವರು. ಕುಟುಂಬರಾಯರ ಸಮ್ಮತಿಯ ಮೊದಲೇ ದೊರೆತಿದೆ"

"ಕುಸುಮಾ, ಏನು ನಿನ್ನ ಕಾರ್ಯದಕ್ಷತೆ! ಆದರೂ ಇದಕ್ಕೆ ನಮಗೆ ಪ್ರತಿಬಂಧಗಳೊದಗಬಹುದು. ಅದನ್ನು ಎದುರಿಸುವ ಬಗೆ?"

"ಜನರ ಮನಸ್ಸೇ ಸುಧಾರಿಸಿರುವಾಗ, ಜನರ ಜೀವನದ ಕ್ರಮವೇ ಬದಲಾಯಿಸಿರುವಾಗ, ನಮಗೆ ಹೆಚ್ಚು ಶ್ರಮ ಉಂಟಾಗಲಾರದು. ಈಗಾಗಲೇ ಸ್ಥಾಪಿಸಲ್ಪಟ್ಟಿರುವ ಸಂಸ್ಥೆಗಳ ನೆರವು ಪಡೆಯುವ ನಮಗೆ ಗೆಲುವು ದೊರೆಯಬಹುದೆಂದು ನಮ್ಮೆದುರು ಪ್ರಕಾಶಿಸುವ ಆ ಶುಕ್ರ ನಕ್ಷತ್ರದ ಹೊಳಪೇ ಸಾರಿ ಹೇಳುತ್ತದೆ."

"ಎಂತಹ ಯೋಚನೆಗಳಿವು ಕುಸುಮಾ? ನಿನ್ನನ್ನು ಕುಲವಿಲ್ಲದ ಹೆಣ್ಣೆಂದು ಹೇಳಲು ಯಾರಿಗೆ ಎದೆ ಇದೆ? ಕುಲದ ಅಂತಸ್ತಿಕೆ ಹುಟ್ಟಿದ ಸ್ಥಾನದಲ್ಲಿರುವುದಿಲ್ಲ. ಕುಲದ ಹಿರಿಮೆಯನ್ನು ಪಡೆದ ಸಂಸ್ಕಾರದಿಂದ, ಸಮಾಜ ಸೇವೆಯ ಆಳತೆಯಿಂದ, ತನ್ನ ಸುತ್ತಮುತ್ತಲಿನ ಜನರ ಜೀವನ ಕ್ರಮ ಸುಧಾರಿಸುವುದರಿಂದ, ಜನರ ಏಳಿಗೆಗಾಗಿ ದುಡಿಯುವ ಹುಮ್ಮಸ ಮುಂತಾದುವುಗಳಿಂದ ಅಳೆಯಬೇಕು. ನಿನ್ನನ್ನು ನನ್ನ ಜೀವನ ಸಂಗಾತಿಯನ್ನಾಗಿಸಿಕೊಂಡು ರಂಗಭೂಮಿಯ ಮೂಲಕ ಸಮಾಜ ಸೇವೆಗೆ ನಿಲ್ಲುವುದಕ್ಕಿಂತ ಉತ್ತಮ ಮಾರ್ಗ ಬೇರೆ ಯಾವುದೂ ಇಲ್ಲ. ಕುಸುಮಾ, ನೀನೇ ನನ್ನ ಜೀವದ ಗೆಳತಿ; ನನ್ನ ಮಾರ್ಗದರ್ಶಿನಿ. ನಮ್ಮ ಜೀವನ ಇಂದಿಗೆ ಸಾರ್ಥಕವಾಯಿತು.''

"ನೋಡಲ್ಲಿ, ಕುಸುಮಾ! ಚಂದಿರನು ನಮ್ಮ ಈ ಹೊಸ ಮಿಲನದ ಸಂಧಿಯನ್ನು ನಾಚಿ, ತನ್ನ ಕಳಂಕ ದೃಷ್ಟಿಯಿಂದ ನಮ್ಮ ಮುಂದಿನ ಜೀವನವು ಕೆಡಬಾರದೆಂದು ನೆನೆದು, ಮೋಡಗಳ ಹಿಂದೆ ಮರೆಯಾಗಿರುವನು. ಆದರೂ ನಮಗದರ ಗೊಡವೆ ಏಕೆ? ಇದೇ ಸುಸಮಯ. ಎಲ್ಲಿ, ಹತ್ತಿರ ಬಾ'' ಎಂದು ನುಡಿದು ಪ್ರಭಾಕರನು ಕುಸುಮಳನ್ನು........

—ಸಂಪೂರ್ಣ—

# ಮನಸ್ಸಿಗೆ ಶಾಂತಿ ಬೇಕೇ?

**ಮೂಲ ಶ್ಲೋಕಗಳೊಂದಿಗೆ ತಿಳಿಗನ್ನಡದಲ್ಲಿ ಹೊಸಕೆರೆ ಚಿದಂಬರಯ್ಯನವರಿಂದ ಅನುವಾದಿಸಲ್ಪಟ್ಟ 400 ಪುಟಗಳಿಗೂ ಮಿಕ್ಕಿದ 'ಗೀತೆಯ ಕೈಗನ್ನಡಿ' ಎಂಬ ಭಗವದ್ಗೀತೆಯನ್ನು ಓದಿರಿ.**

*"ಬೇರೆ ಶಾಸ್ತ್ರಗಳನ್ನೆಷ್ಟೋದಿದರೇನು? ಗೀತೆಯನ್ನು ಚೆನ್ನಾಗಿ ಓದಬೇಕು"

—ವರಾಹಪುರಾಣ.

*"ಹಿಂದೂ ಧರ್ಮದ ಮತ್ತು ನೀತಿಶಾಸ್ತ್ರದ ಮೂಲತತ್ತ್ವವನ್ನು ತಿಳಿಯಬೇಕಾದರೆ ಮೊತ್ತಮೊದಲು ಈ ಅಪೂರ್ವ ಗ್ರಂಥವನ್ನು ಓದಬೇಕು."

—ಲೋಕಮಾನ್ಯ ತಿಲಕ.

*"ನನಗೆ ಸಂದೇಹಗಳು ಬಂದಾಗ, ನಿರಾಶೆಯು ನನ್ನ ಮುಂದೆ ನಿಂತಾಗ ಮತ್ತು ಆಕಾಶಮಂಡಲದಲ್ಲಿ ಯಾವ ಜ್ಯೋತಿಯೂ ಗೋಚರಿಸದಿರುವಾಗ ನಾನು ಗೀತೆಯನ್ನು ಓದುತ್ತೇನೆ. ಆಗ ನನ್ನ ಮನಸ್ಸಿಗೆ ಶಾಂತಿಯನ್ನು ಕೊಡುವಂತಹ ಶ್ಲೋಕವು ಒಂದಿಲ್ಲದಿದ್ದರೆ ಮತ್ತೊಂದು ಸಿಕ್ಕುವುದು."

—ಮಹಾತ್ಮಾ ಗಾಂಧಿ.

*"ಯಾವ ಸಮಾಜವೇ ಆಗಲಿ ಉನ್ನತಿಯ ಶಿಖರವನ್ನು ಹೊಂದಬೇಕಾದರೆ ಭಗವದ್ಗೀತೆಯ ಉಪದೇಶವು ಅತ್ಯುತ್ತಮವಾದದ್ದು."

—ವಾರನ್ ಹೇಸ್ಟಿಂಗ್ಸ್.

**ಎಂದ ಮೇಲೆ ಗೀತೆಯ ಮಹತ್ವದ ವಿಷಯ ಪ್ರತ್ಯೇಕ ಹೇಳಬೇಕಾದ್ದೇನೂ ಇಲ್ಲ. ಗೀತಾ ಧರ್ಮವು ಎಲ್ಲಾ ದೇಶದವರಿಗೂ ಎಲ್ಲಾ ಜಾತಿಯವರಿಗೂ ಅನುಸರಣೀಯವಾದುದರಿಂದ ಪ್ರಪಂಚದಲ್ಲಿ ಗೀತೆಗೆ ಮೊದಲನೆಯ ಸ್ಥಾನವಿದೆ.**

# ಗೀತೆಯ ಕೈಗನ್ನಡಿ

**ಬೆಲೆ: 0—8—0 ; ಉತ್ತಮ ಪ್ರತಿ ರೂ. 0—12—0**

ಪ್ರತಿಗಳು ಪುಸ್ತಕ ವ್ಯಾಪಾರಿಗಳಲ್ಲೆಲ್ಲ ಸಿಗುತ್ತವೆ.

ವಿ. ಪೂ.– ರೂ. 0–12–0 ಕಳಿಸಿದರೆ ಪ್ರತಿಯೊಂದನ್ನು ಬುಕ್ ಪೋಸ್ಟಿನಿಂದ ಕಳಿಸಬಹುದು.

**ನವಯುಗ ಪ್ರೆಸ್, ಉಡುಪಿ, ದ. ಕ.**

# ಏಶಿಯದ ಸಂಪತ್ತು

(ಏಶಿಯದ ಆರ್ಥಿಕ ಸ್ಥಿತಿ ಚಿತ್ರ)

ಬರೆದವರು: **ಕು. ಶಿ. ಹರಿದಾಸ ಭಟ್ಟ**, ಎಂ. ಎ.

ಇಂದಿನ ರಾಜಕೀಯದಲ್ಲಿ ಚರ್ಚಾಸ್ಪದ ಭೂಖಂಡವಾದ ಏಶಿಯದ ರಾಜಕೀಯ ಮತ್ತು ಆರ್ಥಿಕ ಸ್ಥಿತಿಚಿತ್ರವನ್ನು ಸರಳವಾಗಿಯೂ, ವಿಶದವಾಗಿಯೂ, ಸಚಿತ್ರವಾಗಿಯೂ ವಿವರಿಸುವ ಏಕಮಾತ್ರ ಗ್ರಂಥ

**ಏಶಿಯದ ಎಲ್ಲ ವಿದ್ಯಾರ್ಥಿಗಳೂ, ರಾಜಕೀಯಜ್ಞರೂ, ಓದಬೇಕಾದ ಪುಸ್ತಕ.** ಬೆಲೆ: **ಎರಡು ರೂಪಾಯಿ.**

ವಾಚನಾಲಯಗಳಿಗೆ ಅತ್ಯಗತ್ಯವಾದದ್ದು.



ಶಾಲೆ, ಕಾಲೇಜುಗಳ,

ಗ್ರಾಮ, ಪಂಚಾಯತುಗಳ

## ಲೈಬ್ರರಿಗಳಿಗೆ

**ಬೇಕಾಗುವ ಉಪಯುಕ್ತ ಕನ್ನಡ ಪುಸ್ತಕಗಳು ವಿಶೇಷ ಸವಲತ್ತಿನಿಂದ ಸಿಗುತ್ತವೆ.**

ಕೆಟಲಾಗಿಗೆ ಬರೆಯಿರಿ:—

ನವಭಾರತ ಪುಸ್ತಕ ಭಂಡಾರ, ಉಡುಪಿ.

# ಫಂಟಮಾರಾ

ಇಗ್ನೇಸಿಯೋ ಸಿಲೋನೆಯ ಇಟಾಲಿಯನ್ ಕಾದಂಬರಿಯ ಅನುವಾದ

ಅನುವಾದಕರು:— **ಕು. ಶಿ. ಹರಿದಾಸ ಭಟ್ಟ**, ಎಂ. ಎ.

**—ಕೆಲವು ಅಭಿಪ್ರಾಯಗಳು—**

"ಈ ಶತಮಾನದ ಅತ್ಯಂತ ಮರ್ಮಸ್ಪರ್ಶಿ ಕಾದಂಬರಿಗಳಲ್ಲೊಂದು"

—ಕರ್ಮವೀರ.

"ಮೂಲಗ್ರಂಥದ ವೈಶಿಷ್ಟ್ಯಗಳೆಲ್ಲ ಸಮರ್ಪಕವಾಗಿ ಕನ್ನಡಿಸಲ್ಪಟ್ಟಿರುವುದನ್ನು ನೋಡುವಾಗ ಅನುವಾದವು ಸರ್ವೋತ್ತಮವೆಂದು ಹೇಳಲು ಅಡ್ಡಿ ಇಲ್ಲ. ಅನುವಾದ ಮಾಡಿದ ಶ್ರೀ ಭಟ್ಟರೂ ಮಾಡಿಸಿದ ಪ್ರಕಾಶಕರೂ ಅಭಿನಂದನೀಯರು."

—ಇಂಡಿಯನ್ ಎಕ್ಸ್‌ಪ್ರೆಸ್.

200 ಪುಟಗಳ ಈ ಕಾದಬರಿಯ ಬೆಲೆ ರೂ. 2—0—0



**ಮನದಲ್ಲಿ ನಗುವಿದೆ! ನಗುವಿದ್ದಲ್ಲಿ ಸ್ವರ್ಗವಿದೆ!**

**ದಣಿದ ಮನವನ್ನು ತಣಿಸಿ ನಗಿಸಲು—**

# ನಗೆ ನೋಟಗಳು

**(೧೧ ವಿನೋದ ಚಿತ್ರಗಳ ಅಪೂರ್ವ ಸಂಗ್ರಹ)**

ಲೇಖಕರು: **ಕೆ. ವಿಟ್ಠಲ ಶೆಣೈ**, ಬಿ. ಎ., ಎಲ್. ಟಿ.

(ಮುಳಿಯ ತಿಮ್ಮಪ್ಪಯ್ಯನವರ ಮುನ್ನುಡಿಯೊಡನೆ)

**ನೀವೂ ನಕ್ಕು ಅನ್ಯರನ್ನೂ ನಗಿಸಬೇಕಾದರೆ ಈ ಪುಸ್ತಕದ ಪ್ರತಿಯೊಂದು** ನಿಮ್ಮ ಬಳಿಯಲ್ಲಿರಲಿ.

ಬೆಲೆ: ೧—೪—೦ (ಟ. ಖರ್ಚು ಬೇರೆ)

**ನವಭಾರತ ಪುಸ್ತಕ ಭಂಡಾರ, ಉಡುಪಿ, ದ. ಕ.**

–ಕನ್ನಡದಲ್ಲಿ ಹೊಸ ಬಗೆಯ ಗ್ರಂಥ–

# ಬದುಕು ಬಂಗಾರ

( ಬರೆದವರು: **ಕುಮಾರಸ್ವಾಮಿ** )

- ಬಾಳ್ವೆಯ ಹಲವು ಪ್ರಶ್ನೆಗಳನ್ನು ದಿಟ್ಟತನದಿಂದ ಉತ್ತರಿಸಿ ಚೈತನ್ಯ ಪೂರ್ಣ ವ್ಯಕ್ತಿತ್ವಕ್ಕೆ ಒಪ್ಪವಿಡುವ ಪುಸ್ತಕ.
- ಪ್ರತಿಯೊಬ್ಬನೂ ಸಂಗ್ರಹಿಸಬೇಕಾದ ಸುಖಜೀವನದ ಕೈಗನ್ನಡಿ.

ಬೆಲೆ: **ಒಂದೂವರೆ ರೂಪಾಯಿ.**

ಕರ್ನಾಟಕದ ಎಲ್ಲ ಕಡೆಗಳ ಪುಸ್ತಕಗಳೂ ಸಿಗುತ್ತವೆ. ವಿಶೇಷ ಸವಲತ್ತುಗಳಿಗೂ ಕೆಟಲಾಗಿಗೂ ಬರೆಯಿರಿ—

**ನವಯುಗ ಪ್ರೆಸ್, ಉಡುಪಿ.**



ಸ್ಥಾಪನೆ ೧೯೨೧

# ನವಯುಗ

ಉಜ್ವಲ ರಾಷ್ಟ್ರೀಯ ವಾರಪತ್ರಿಕೆ

ಉಡುಪಿ – – ದ. ಕನ್ನಡ.

**ಜಾಹೀರಾತಿಗೆ ಉತ್ತಮ ಸಾಧನ**

ಚಂದಾದಾರರಾಗಿ ಪ್ರೋತ್ಸಾಹಿಸಿರಿ.